

ಕನ್ನಡ ವಿಶ್ವವಿದ್ಯಾನಿಲಯ

ಕನ್ನಡ ಎಂ.ಫಿಲ್ ಪದವಿಯ ಭಾಗವಾಗಿ ಸಾದರಪಡಿಸಿದ ಸಂಪ್ರಬಂಧ

# ಶ್ರೀ ರಾಮಾಯಣದರ್ಶನಂ ಮತ್ತು ವಾಲ್ಮೀಕಿ ರಾಮಾಯಣದಲ್ಲಿ ಸೀತೆ – ಒಂದು ತೌಲನಿಕ ಅಧ್ಯಯನ


ಮಾರ್ಗದರ್ಶಕರು

ಡಾ.ಮಳಲಿ ವಸಂತಕುಮಾರ್

ವಿಶ್ರಾಂತ ಕನ್ನಡ ಪ್ರಾಧ್ಯಾಪಕರು

ಮೈಸೂರು ವಿಶ್ವವಿದ್ಯಾನಿಲಯ

ಮೈಸೂರು.

ನಿಬಂಧಕಾರರು

ಪುಷ್ಪ ಎಸ್.

ಎಂ.ಫಿಲ್. ವಿದ್ಯಾರ್ಥಿನಿ



ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ

ಮೈಸೂರು

೨೦೦೭-೦೮






ಕನ್ನಡ ವಿಶ್ವವಿದ್ಯಾನಿಲಯ

ಕನ್ನಡ ಎಂ.ಫಿಲ್ ಪದವಿಯ ಭಾಗವಾಗಿ ಸಾದರಪಡಿಸಿದ ಸಂಪ್ರಬಂಧ

# ಶ್ರೀ ರಾಮಾಯಣದರ್ಶನಂ ಮತ್ತು ವಾಲ್ಮೀಕಿ ರಾಮಾಯಣದಲ್ಲಿ ಸೀತೆ – ಒಂದು ತೌಲನಿಕ ಅಧ್ಯಯನ

ಮಾರ್ಗದರ್ಶಕರು
**ಡಾ.ಮಳಲಿ ವಸಂತಕುಮಾರ್**
ವಿಶ್ರಾಂತ ಕನ್ನಡ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು.

ನಿಬಂಧಕಾರರು
**ಪುಷ್ಪ ಎಸ್.**
ಎಂ.ಫಿಲ್. ವಿದ್ಯಾರ್ಥಿನಿ



**ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್**
**ಜಯಲಕ್ಷ್ಮೀಪುರಂ**
**ಮೈಸೂರು**

೨೦೦೭–೦೮




## ದೃಢೀಕರಣ ಪತ್ರ

೨೦೦೭–೦೮ನೇ ಸಾಲಿನ ಕ್ರಮ ಸಂಖ್ಯೆ KVTM-00161 ರ **ಪುಷ್ಪ ಎಸ್.** ಎಂ.ಫಿಲ್., ವಿದ್ಯಾರ್ಥಿನಿಯು ಈ ಪರೀಕ್ಷೆಯ ಅಂಗವಾಗಿ **ಶ್ರೀ ರಾಮಾಯಣದರ್ಶನಂ ಮತ್ತು ವಾಲ್ಮೀಕಿ ರಾಮಾಯಣದಲ್ಲಿ ಸೀತೆ – ಒಂದು ತೌಲನಿಕ ಅಧ್ಯಯನ** ಎಂಬ ವಿಷಯವನ್ನು ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿದ್ದಾರೆ. ಇದನ್ನು ಇವರು ಈ ಮೊದಲು ಯಾವುದೇ ಬಗೆಯ ಪದವಿ, ಡಿಪ್ಲೊಮಾ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿಲ್ಲ ಎಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು
ವಿಶ್ರಾಂತ ಕನ್ನಡ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು.

ಸ್ಥಳ: ಮೈಸೂರು
ದಿನಾಂಕ: ೧೫/೬/೨೦೦೮

# ಪ್ರಮಾಣ ಪತ್ರ

**ಶ್ರೀ ರಾಮಾಯಣದರ್ಶನಂ ಮತ್ತು ವಾಲ್ಮೀಕಿ ರಾಮಾಯಣದಲ್ಲಿ ಸೀತೆ – ಒಂದು ತೌಲನಿಕ ಅಧ್ಯಯನ** ಎಂಬ ವಿಷಯದ ಸಂಶೋಧನ ನಿಬಂಧವನ್ನು ಕನ್ನಡ ಎಂ.ಫಿಲ್, ಪದವಿಯ **ಮಷ್ಪ ಎಸ್**. ಕ್ರಮ ಸಂಖ್ಯೆ KVTM-00161 ರ ವಿದ್ಯಾರ್ಥಿನಿಯಾದ ನಾನು ೨೦೦೭–೦೮ನೇ ಸಾಲಿನ ಪರೀಕ್ಷೆಗಾಗಿ ಮಾರ್ಗದರ್ಶಕರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಈ ನಿಬಂಧವನ್ನು ಯಾವುದೇ ಬಗೆಯ ಪದವಿ, ಡಿಪ್ಲೊಮಾ ಅಥವಾ ಪ್ರಶಸ್ತಿಗಾಗಿ ಯಾವ ವಿಶ್ವವಿದ್ಯಾನಿಲಯಕ್ಕೂ ಸಲ್ಲಿಸಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

ನಿಬಂಧಕಾರರು
**ಮಷ್ಪ ಎಸ್.**
ಎಂ.ಫಿಲ್., ವಿದ್ಯಾರ್ಥಿನಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮಿಪುರಂ
ಮೈಸೂರು.

ಸ್ಥಳ: ಮೈಸೂರು
ದಿನಾಂಕ: ೧೨-೦೯-೦೮

# ಪರಿವಿಡಿ

## ಕುವೆಂಪು ಶ್ರೀ ರಾಮಾಯಣದರ್ಶನಂ ಮತ್ತು ವಾಲ್ಮೀಕಿ ರಾಮಾಯಣಗಳಲ್ಲಿ ಸೀತೆ–ಒಂದು ತೌಲನಿಕ ಅಧ್ಯಯನ


ಅಧ್ಯಾಯ ೧ : ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಅಧ್ಯಾಯ ೨ : ವಾಲ್ಮೀಕಿ ರಾಮಾಯಣದಲ್ಲಿ ಸೀತೆ

ಅಧ್ಯಾಯ ೩ : ಶ್ರೀ ರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಸೀತೆ

ಅಧ್ಯಾಯ ೪ : ಶ್ರೀ ರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಕಂಡ ಬದಲಾವಣೆಯ ಮಹತ್ವ

ಅಧ್ಯಾಯ ೫ : 'ಸೀತಾಪಹರಣ' ಒಂದು ಅಧ್ಯಯನ

ಅಧ್ಯಾಯ ೬ : ಸೀತೆ ಪಾತ್ರದ ಆಧ್ಯಾತ್ಮಿಕ ಮಹತ್ವ

ಅಧ್ಯಾಯ ೭ : ಉಪಸಂಹಾರ

ಅಧ್ಯಯನ ಸಾಮಗ್ರಿಗಳು

# ಅಧ್ಯಾಯ ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ತಿಣಿಕಿದನು ಫಣಿರಾಯ ರಾಮಾ
ಯಣದ ಕವಿಗಳ ಭಾರದಲಿ ತಿಂ
ಥಿಣಿಯ ರಘುವರ ಚರಿತೆಯಲಿ ಕಾಲಿಡಲು ತೆಱಪಿಲ್ಲ
ಬಣಗು ಕವಿಗಳ ಲೆಕ್ಕಪನೆ ಸಾ
ಕೆಣಿಸದಿರು ಶುಕರೂಪನಲ್ಲನೆ
ಕುಣಿಸಿ ನಗನೇ ಕವಿ ಕುಮಾರವ್ಯಾಸನುಳಿದವರ[೧]

ಸಾವಿರ ವರ್ಷಗಳಿಂದಲೂ ವಾಲ್ಮೀಕಿ ಉಲಿದ ಕಥೆಗೆ ಮನಸೋಲದ ಕವಿಗಳಿಲ್ಲ. ಅನೇಕ ಕವಿಗಳು ರಾಮಾಯಣದ ಕಥೆಗೆ ಆಕರ್ಷಿತರಾಗಿ ಕಾಲದಿಂದ ಕಾಲಕ್ಕೆ ತಮ್ಮ ನೆಲಕ್ಕನುಗುಣವಾಗಿ ಮಾರ್ಪಡಿಸುತ್ತಾ ಸಾಗಿಸಿಕೊಂಡು ಬಂದಿದ್ದಾರೆ. ಭಾರತೀಯರಿಗೆ ಪರಮಪೂಜ್ಯವೂ ಜಗದ್ವಿಖ್ಯಾತವಾಗಿಯೂ ಇರುವುದರ ಜೊತೆಗೆ ಕನ್ನಡಿಗರಾದ ನಮಗೆ ದಿನ ಕಥೆಯಾಗಿ, ಮನೆ ಕಥೆಯಾಗಿ ಮನಗತವಾಗಿದೆ. ಈ ಕಾವ್ಯವು ಚಿತ್ರವಿಚಿತ್ರ ರಮಣೀಯಾದ್ಭುತ ಜ್ವಲಂತ ಘಟನೆಗಳ ಸಮುದಾಯಗಳಿಂದ ಕೂಡಿ ರಾರಾಜಿಸುತ್ತಾ ಸರ್ವೋತ್ಕೃಷ್ಟವಾಗಿ, ಸರ್ವ ಜನಾಧರಣೀಯವಾಗಿ ಸರ್ವ ಕವಿಗಳ ಪ್ರೀತಿಗೆ ಪಾತ್ರವಾಗಿದೆ. ವಾಲ್ಮೀಕಿ ರಾಮಾಯಣ ಸಂಸ್ಕೃತ ಮೊದಲ್ಗೊಂಡು ಅನೇಕ ದೇಶ ಭಾಷೆಗಳಲ್ಲಿ ನೂರಾರು ಪ್ರಾಯಶಃ ಸಾವಿರಾರು ಕವಿಗಳು ತಮ್ಮ ಮಾತಿನಲ್ಲಿ ಹೇಳಿದ್ದಾರೆ. ಅದಕ್ಕಾಗಿಯೇ ಕುಮಾರವ್ಯಾಸ ಈ ಉದ್ಗಾರವನ್ನು ತೆಗೆದದ್ದು.

'ವಾಲ್ಮೀಕಿ ರಾಮಾಯಣವೆಂದರೆ ಭಾರತೀಯ ಸಂಸ್ಕೃತಿಯ ಜೀವನಾದರ್ಶಗಳ ನೈಜ ಚಿತ್ರಣ, ವಾಲ್ಮೀಕಿಯು ಅದನ್ನು ಕಾವ್ಯ ರೂಪದಲ್ಲಿ ರಚಿಸಿದ್ದಾನೆ. ಈ ಕಾವ್ಯವು ಆದರ್ಶ ಮಹಾಕಾವ್ಯವೆಂದು ಪರಿಗಣಿತವಾಗಿದೆ. ದಂಡಿ ಮೊದಲಾದ ಕವಿಶ್ರೇಷ್ಠರು ಈ ಕಾವ್ಯದಿಂದ ಮಹಾಕಾವ್ಯದ ಲಕ್ಷಣಗಳನ್ನು ಎತ್ತಿಕೊಂಡಿದ್ದಾರೆ. ಪಂಚಮಹಾಕಾವ್ಯಗಳಲ್ಲಿ ಇದೂ ಒಂದು ಶ್ರೇಷ್ಠ ಕಾವ್ಯವೆಂದು ಕಾವ್ಯಮರ್ಮಜ್ಞರು ಇದನ್ನು ಶ್ಲಾಘಿಸಿದ್ದಾನೆ. ಅಷ್ಟೇ ಅಲ್ಲದೆ ಪರದೇಶದ ರಸಿಕರೂ ಕೂಡ ಇದರ ರಸವತ್ತತೆಯನ್ನು ಕೊಂಡಾಡಿದ್ದಾರೆ'[೨] ಎಂದು ರಾಮಾಯಣವನ್ನು ಆಳವಾಗಿ ಅಧ್ಯಯನ ಮಾಡಿದ ಡಾ.ಗ.ನ.ಸಾಠೆ ಅವರು ಉದ್ಗರಿಸಿದ್ದಾರೆ. ಈ ಆಧುನಿಕ ಯುಗದಲ್ಲೂ ಈ ಮಹಾಕೃತಿ ತನ್ನ ಮೌಲ್ಯವನ್ನು ಕಳೆದುಕೊಂಡಿಲ್ಲ. ಅನೇಕ ಕವಿಗಳನ್ನು, ಸಂಶೋಧಕರನ್ನು, ವಿಮರ್ಶಕರನ್ನು ತನ್ನತ್ತ ಸೆಳೆಯುತ್ತಲೇ ಇದೆ. ವಾಲ್ಮೀಕಿಯ ರಾಮ, ರಾವಣ, ಸೀತೆ, ಮಂಡೋದರಿ, ಮಂಥರೆ, ಕೈಕೆ, ಊರ್ಮಿಳೆ ಇತ್ಯಾದಿ ಪಾತ್ರಗಳನ್ನು ತಮ್ಮ ಅಂತರ್ ಚಕ್ಷುವಿನ ಮೂಲಕ ವಿಶ್ಲೇಷಿಸುತ್ತಾ, ಚರ್ಚಿಸುತ್ತಾ ಅನೇಕ ಸ್ವತಂತ್ರ ನಾಟಕಗಳನ್ನು,

---

[೧] ಕುಮಾರವ್ಯಾಸ ಮಹಾಕವಿಯ ಕರ್ಣಾಟ ಭಾರತ ಕಥಾಮಂಜರಿ, ಸಂ. ಕುವೆಂಪು, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪ್ರಸಾರಂಗ, ಮೈಸೂರು ವಿ.ವಿ. ೧೯೮೮, ಪುಟ ೨, ಸಂಧಿ ೧.

[೨] ವಾಲ್ಮೀಕಿ ರಾಮಾಯಣ ಶಾಪ ಮತ್ತು ವರ, ಅನುವಾದಕರು ಸೌ.ಸರಸ್ವತಿ ಗಜಾನನರಿಸಬೂಡ, ಪುಟ ೨೦.

ಮಹಾಕಾವ್ಯಗಳನ್ನು ತಮ್ಮ ನವನವೋನ್ಮೇಶ ಪ್ರತಿಭೆಯಿಂದ ಹೊಸದಾಗಿ ಕಟ್ಟುವ ಕಾಯಕದಲ್ಲಿ ಕೈಹಾಕಿದ ಮಹಾನುಭಾವರೂ ಇದ್ದಾರೆ. ಹೀಗೆ ವಾಲ್ಮೀಕಿಯ ದನಿಗೆ ಮನಸೋತು ಹೊಸದಾಗಿ ಕನ್ನಡಿಸಿದ ಕವಿಗಳಲ್ಲಿ ಮಹಾಕವಿಯಾದವರು ಕುವೆಂಪು ಸುಮಾರು ೨೦೦೦ ವರ್ಷಗಳಿಂದ ಭಾರತೀಯ ಮಹಾ ಪ್ರವಾಹವೆನಿಸಿದ ವಾಲ್ಮೀಕಿ ರಾಮಾಯಣವನ್ನು ಈ ಮಹಾಕವಿ ತಮ್ಮ ಕೃತಿಯ ಬಿತ್ತಿಯಾಗಿ ಇರಿಸಿಕೊಂಡು ಆ ಪರಂಪರೆಯ ಸದ್ವಿಚಾರಗಳನ್ನು ವಿಕೃತಗೊಳಿಸದೆ ಅದರ ಓರೆಕೋರೆಗಳನ್ನು ದೋಷ ದೌಬಲ್ಯಗಳನ್ನು ಪ್ರಸ್ತುತ ಕಾಲಮಾನ ಹಾಗೂ ದೃಷ್ಟಿಧೋರಣೆಗಳಿಗೆ ಅನುಗುಣವಾಗಿ ಸುಧಾರಿಸುತ್ತಾ ಕಾವ್ಯವನ್ನು ಅಭೂತಪೂರ್ವವಾಗಿ ಮುನ್ನಡೆಸುತ್ತಾ ಹೋಗಿದ್ದಾರೆ.

ವಾಲ್ಮೀಕಿ ರಾಮಾಯಣವೇ ಮೂಲ ರಾಮಾಯಣ ಎಂದು ಇಟ್ಟುಕೊಂಡರೂ ಅಲ್ಲಿಂದ ಇಲ್ಲಿಯವರೆಗೆ ಅದು ನಡೆದುಬಂದಿರುವ ದಾರಿಯನ್ನು ಗಮನಿಸುವಾಗ ಹಲವು ಸ್ಥಿತ್ಯಂತರಗಳು ಸಹಜವಾಗಿಯೇ ಕಂಡುಬರುತ್ತವೆ. ಹೊಸ ಪ್ರಜ್ಞೆ-ಸಂವೇದನೆಗಳಿಂದ ತನ್ನ ಕಾಲದ ಸಾಮಾಜಿಕ ಜವಾಬ್ದಾರಿಯನ್ನು ಹೊತ್ತು ಹೊರಹೊಮ್ಮಿದ ಕಾವ್ಯ ಮಹತ್ವದ ಕಾವ್ಯವಾಗಿ ಮನ್ನಣೆ ಪಡೆಯುತ್ತದೆ. ಸಾಮಾಜಿಕ ಕಾಳಜಿಯನ್ನು ಹೊತ್ತು ಕಾವ್ಯ ರಚನೆಗೆ ಕೈಹಾಕಿದ ವ್ಯಕ್ತಿ ಕಥೆ ಬೆಳೆಸಿಕೊಂಡು ಹೋಗುವಷ್ಟರಲ್ಲಿಯೇ ತೃಪ್ತನಾಗುವುದಿಲ್ಲ. ತನ್ನ ಕಾಲದ ಎಲ್ಲ ತೊಡಕುಗಳನ್ನು ಹಾದು ಹೋಗುತ್ತಾನೆ. ಅವುಗಳನ್ನು ಬಿಡಿಸಲು ಮಾರ್ಗಗಳನ್ನು ತೋರುತ್ತಾ ಹೋಗುತ್ತಾನೆ. ವಿಶ್ವಪಥ ಮನುಜಮಥದಂತಹ ದಾರಿಯನ್ನು ತೋರಿ ಸಂಕೋಲೆಯಿಂದ ಹೊರಬರಲು ಸಹಾಯಕನಾಗುತ್ತಾನೆ. ಹೀಗೆ ಒಂದು ಹೊಸ ದಿಶೆಯನ್ನು ತೋರಲು ಮಹಾಕವಿಗಳಲ್ಲದೆ ಮತ್ಯಾರಿಗೂ ಸಾಧ್ಯವಾಗುವುದಿಲ್ಲ. 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ಮೂಲಕ ರಸಋಷಿ ಕುವೆಂಪು ಈ ಕೆಲಸವನ್ನು ಮಾಡಿದ್ದಾರೆ.

ವಾಲ್ಮೀಕಿಯುಲಿದ ಕಥೆಯಾದೊಡಂ, ಕನ್ನಡದಿ
ಬೇರೆ ಕಥೆಯೆಂಬಂತೆ, ಬೇರೆ ಮೈಯಾಂತಂತೆ,
ಮರುವುಟ್ಟುವಡೆದಂತೆ ಮೂಡಿದೀ ಕಾವ್ಯಮಂ
ವಿಶ್ವವಾಣಿಗೆ ಮುಡಿಯ ಮಣಿ ಮಾಡಿಹೆನ್ . . .[೧]
ತನುನಿನ್ನದಾದೊಡಂ ಚೈತನ್ಯಮೆನ್ನದೆನೆ
ಕಥೆ ನಿನ್ನದಾದೊಡಂ, ನೀನೆ ಮೇಣಾಶೀರ್ವದಿಸಿ
ಮತಿಗೆ ಬೋಧವನಿತ್ತೊಡಂ, ಕೃತಿ ನನ್ನ ದರ್ಶನಂ
ಮೂರ್ತಿವೆತ್ತೊಂದಮರ ಕಾವ್ಯದಾಕೃತಿಯಲ್ತೆ?[೨]

---

[೧] 'ಶ್ರೀರಾಮಾಯಣ ದರ್ಶನಂ' : ವೆಂಕಣ್ಣಯ್ಯನವರಿಗೆ, ಪುಟ ೧೫, ಸಾಲು ೧೪-೧೭
[೨] ಅದೇ, 'ಕವಿಕ್ರತುದರ್ಶನಂ', ಪುಟ ೬, ಸಾಲು ೧೦೧-೦೪.

ಕುವೆಂಪು ಕೈಯಿಂದ ಅರಳಿದ ಈ ಕೃತಿ ಮೂಲಕ್ಕಿಂತ ಭಿನ್ನವಾಗಿದೆ ಎಂಬುದು ಈ ಮೇಲಿನ ಮಾತಿನಿಂದಲೇ ಸ್ಪಷ್ಟವಾಗುತ್ತದೆ. ಸಮಕಾಲೀನ ಯೋಚನೆ, ಆಲೋಚನೆ ಸನಾತನ ಯೋಚನೆ ಆಲೋಚನೆಗಳ ಲೋಪದೋಷಗಳನ್ನು ಒರೆಗಿಕ್ಕಿ ಉಜ್ಜಿ ಉಜ್ವಲಗೊಳಿಸುತ್ತಲೇ ಅನೇಕ ಹೊಸಪಾತ್ರಗಳನ್ನು ಹೊಸ ಹೊಸ ಸನ್ನಿವೇಶಗಳನ್ನು ತರುತ್ತಾರೆ. ಮೂಲದಲ್ಲಿನ ದುಷ್ಟ ಪಾತ್ರಗಳು ರಾಮನ, ಸೀತೆಯ ಪ್ರತ್ಯಕ್ಷ, ಅಪ್ರತ್ಯಕ್ಷ ಪ್ರಭಾವದಿಂದ ಹಂತಹಂತವಾಗಿ ತಮ್ಮ ಕಿಲ್ಬಿಷಗಳನ್ನು ಕಳೆದುಕೊಂಡು ದುರಂತದ ಕಡೆಗೆ ಮುಖಮಾಡಿಕೊಳ್ಳುತ್ತವೆ. ಮೂಲದಲ್ಲಿ ಯಕಶ್ಚಿತವಾಗಿದ್ದ ಪಾತ್ರಗಳು ಕುವೆಂಪು ಕೈಯಿಂದ ಅರಳಿ ಕೃತಿಯಲ್ಲಿ ಮತ್ತು ಓದುಗನಲ್ಲಿ ತಮ್ಮದೇ ಆದ ಸ್ಥಾನಗಿಟ್ಟಿಸಿಕೊಳ್ಳುತ್ತವೆ. ಪ್ರತಿಯೊಂದು ಪಾತ್ರಕ್ಕೂ ತನ್ನದೆ ಆದ ಪ್ರಾಮುಖ್ಯತೆಯಿದೆ. ಇಲ್ಲಿ ಯಾವುದು ಯಕಶ್ಚಿತವಲ್ಲ, ಎಲ್ಲ ಪಾತ್ರಗಳಿಗೂ ಅದರದೇ ಆದ ನ್ಯಾಯ ದೊರಕಿಸಿಕೊಡುವಲ್ಲಿ ಕುವೆಂಪು ಸಮರ್ಥರಾಗುತ್ತಾರೆ. ಈ ಮಹಾಕಾವ್ಯಗಳಲ್ಲಿ ಪ್ರಮುಖ ಪಾತ್ರ ಮತ್ತು ನಾಯಕಿಯ ಪಾತ್ರ ಸೀತೆಯದ್ದು. ವಾಲ್ಮೀಕಿ ತನ್ನ ಅಮರ ಕೃತಿಯಲ್ಲಿ ಆಕೆಯನ್ನು ಸ್ತ್ರೀಲೋಕದ ಅನರ್ಘ್ಯ ಅನುಪಮ ಸರ್ವಶ್ರೇಷ್ಠ ಪ್ರತಿಮೆಯನ್ನಾಗಿ ಸೃಷ್ಟಿಸಿದ ಅಂದಿನಿಂದ ಆಕೆ ಅನುದಿನವೂ ಒಂದಲ್ಲ ಒಂದು ರೀತಿಯಲ್ಲಿ ನಮ್ಮ ಸ್ತ್ರೀಯರ ಮನೋಭೂಮಿಕೆಯಲ್ಲಿ ಅತ್ಯುಚ್ಛ ಮಾರ್ಗದರ್ಶಿನಿಯಾಗಿದ್ದಾಳೆ.

'ಶ್ರೀ ರಾಮಾಯಣದರ್ಶನಂ ಮತ್ತು ವಾಲ್ಮೀಕಿ ರಾಮಾಯಣಗಳಲ್ಲಿ ಸೀತೆ : ಒಂದು ತೌಲನಿಕ ಅಧ್ಯಯನ' ಎಂಬ ನನ್ನ ಒಂದು ಸಂಪ್ರಬಂಧದಲ್ಲಿ ವಾಲ್ಮೀಕಿ ಮತ್ತು ಕುವೆಂಪು ಅವರ ರಾಮಾಯಣದಲ್ಲಿ ಕಂಡುಬರುವ 'ಸೀತೆ' ಪಾತ್ರವನ್ನು ಮಾತ್ರ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದೆ. ಜಾನಕಿಯ ಮಹತ್ವಪೂರ್ಣವಾದ ಗುಣಗಳು ಹಲವಾರು. ಅವುಗಳಲ್ಲಿ ಅತಿ ಪ್ರಮುಖವಾದುದು ಮೂಲಭೂತವಾದದ್ದು ಯಾವುದೆಂದು ನಿರ್ಣಯಿಸುವುದು ಕಷ್ಟದ ಕೆಲಸವೇ ಸರಿ. ಈ ನಿರ್ಣಯವನ್ನು ಮಾಡುವಾಗ ಪೂರ್ಣವಾಗಿ ಶ್ರೀರಾಮನನ್ನು ಸೀತೆಯಿಂದ ಪ್ರತ್ಯೇಕಿಸಲು ಸಾಧ್ಯವಿಲ್ಲ. ಅವನ ಗುಣಗಳೆಲ್ಲಾ ಸೀತೆಯ ಗುಣಗಳಿಗೆ ಹಿನ್ನೆಲೆಯಾಗಿ, ಭೂಮಿಕೆಯಾಗಿ, ಪ್ರಚೋದನಾತ್ಮಕವಾಗಿ ನಿಲ್ಲುತ್ತವೆ. ಅವುಗಳು ಸೀತಾ ಮಹತ್ವದ ವ್ಯಕ್ತಿತ್ವಕ್ಕೆ ಪ್ರೇರಕ, ಪೂರಕಗಳಾಗಿಯೂ ಪರೀಕ್ಷಾ ಕ್ರಿಯೆಗಳಾಗಿಯೂ ಸಂಭವಿಸುತ್ತವೆ. ಅವುಗಳಿಗೆ ಸೂಕ್ತ ಪ್ರತಿಕ್ರಿಯೆಯನ್ನು ಅಭಿವ್ಯಕ್ತಗೊಳಿಸಿ ಸಹಧರ್ಮಚರಣೆಯಲ್ಲಿ ಮಹತ್ವಪೂರ್ಣವಾದ ಚಾರಿತ್ರ್ಯವನ್ನು ನಿರ್ಧರಿಸುವಲ್ಲಿ ಅವಳ ಬಾಳನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕಾಗುತ್ತದೆ.

ರಾಮನ ಮೆಚ್ಚಿನ ಮಡದಿಯಾಗಿ, ಗಂಡನೊಟ್ಟಿಗೆ ನಾಡಾದೊಡಂ ಕಾಡುಹಿತವೇ ಎಂದು ಸಂತೋಷದಿಂದ ಕಾಡಿಗೆ ಹೊರಟು ನಿಂತ, ಕಾನನದಲ್ಲಿ ಸಾಂಸಾರಿಕ ಜೀವನದಲ್ಲೂ ಬ್ರಹ್ಮಚಾರ್ಯವನ್ನು ಆಚರಿಸಿದ, ಕೊನೆಗೆ ರಾಕ್ಷಸನ ಬಂಧನಕ್ಕೊಳಗಾದರೂ ಅವನ ಕಣ್ಗಾವಲಲ್ಲಿ ಇದ್ದುಕೊಂಡೆ ಆತನನ್ನೆ ದಿಕ್ಕರಿಸಿ ಎದುರಿಸಿ ಗೆದ್ದ ದಿಟ್ಟ ಹೆಣ್ಣುಮಗಳು ಜಾನಕಿ ಅಷ್ಟೇ ಅಲ್ಲ ಆಕೆ ಭಾರತೀಯ ನಾರಿಯರಿಗೆ ಪರಮಪೂಜ್ಯಳು, ಆದರ್ಶಮಾತೆ ಕೂಡ.

ಈ ನನ್ನ ಅಧ್ಯಯನದಲ್ಲಿ ೭ ಅಧ್ಯಯಗಳನ್ನು ಮಾಡಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ತಿಳಿಸುತ್ತದೆ. ಎರಡನೇ ಅಧ್ಯಾಯ 'ವಾಲ್ಮೀಕಿ ರಾಮಾಯಣದಲ್ಲಿ ಸೀತೆ' ಈ ಅಧ್ಯಾಯದಲ್ಲಿ ಮೂಲ ವಾಲ್ಮೀಕಿ ರಾಮಾಯಣದಲ್ಲಿನ

ಬಲಕಾಂಡ, ಅಯ್ಯೋಧ್ಯಾಕಂಡ, ಅರಣ್ಯಕಾಂಡ, ಕಿಷ್ಕಿಂದಕಾಂಡ, ಸುಂದರಕಾಂಡ, ಯುದ್ಧಕಾಂಡಗಳಲ್ಲಿ ಮೂಡಿ ಬಂದಿರುವ ಸೀತೆಯ ಪಾತ್ರವನ್ನು ವಿವೇಚಿಸುವ ಕಾರ್ಯವನ್ನು ಮಾಡಲಾಗಿದೆ. ಮೂರನೇ ಅಧ್ಯಾಯ 'ಶ್ರೀ ರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಸೀತೆ' ಇದರಲ್ಲಿ ಕುವೆಂಪು ರಾಮಾಯಣದ ಅಯೋಧ್ಯಾ ಸಂಪುಟಂ, ಕಿಷ್ಕಿಂಧಾ ಸಂಪುಟಂ, ಲಂಕಾ ಸಂಪುಟಂ, ಶ್ರೀ ಸಂಪುಟಂಗಳಲ್ಲಿ ಮೂಡಿ ಬಂದಿರುವ ಸೀತೆಯ ಪಾತ್ರವನ್ನು ಅಧ್ಯಯನ ಮಾಡಲಾಗಿದೆ. ನಾಲ್ಕನೇ ಅಧ್ಯಾಯದಲ್ಲಿ 'ಶ್ರೀ ರಾಮಾಯಣದರ್ಶನಂ ಕಾವ್ಯದಲ್ಲಿ ಕಂಡ ಬದಲಾವಣೆ ಮಹತ್ವ'ವನ್ನು ತಿಳಿಸುವ ಪ್ರಯತ್ನ ಮಾಡಲಾಗಿದೆ. ಐದನೇ ಅಧ್ಯಾಯ 'ಸೀತಾಪಹರಣ' ಒಂದು ಅಧ್ಯಯನ ಕಾವ್ಯದ ಮುನ್ನಡೆಗೆ ಪ್ರಮುಖ ಕಾರಣ, ಪ್ರೇರಣೆಯಾದ ಸೀತಾಪಹರಣವನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡುವ ಪ್ರಯತ್ನಕ್ಕೆ ಕೈ ಹಾಕಲಾಗಿದೆ. ಆರನೇ ಅಧಾಯ 'ಸೀತೇ ಪಾತ್ರದ ಅಧ್ಯಾತ್ಮಿಕ ಮಹತ್ವ' ಮತ್ತು ಏಳನೇ ಅಧ್ಯಾಯ 'ಉಪಸಂಹಾರ'ವನ್ನು ಒಳಗೊಂಡಿದೆ. ಈ ರೀತಿ ಅಧ್ಯಯನದ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಂಡು ಸಮಗ್ರವಾಗಿ ವಿವೇಚಿಸುವ ಪ್ರಯತ್ನವನ್ನು ಮಾಡಲಾಗಿದೆ.



# ಅಧ್ಯಾಯ ೨

## ವಾಲ್ಮೀಕಿ ರಾಮಾಯಣದಲ್ಲಿ ಸೀತೆ

**ಬಾಲಕಾಂಡ**

ಸ್ವಾಮಿ ವಿವೇಕಾನಂದರು ಭಾರತದ ಆದರ್ಶ ಮಹಿಳೆಯರನ್ನು ಕುರಿತು ಮಾತನಾಡುವಾಗ 'ರಾಮನಂತಹ ಮಹಾಪುರುಷನನ್ನು ಕಂಡರೂ ಕಾಣಬಹುದು ಸೀತೆಯಂತಹ ಮಹಿಳಾರತ್ನವನ್ನು ಜಗತ್ತಿನಲ್ಲಿ ಕಾಣುವುದು ಅಪೂರ್ವ'[೧] ಎಂದು ಹೇಳಿದ್ದಾರೆ. ಒಂದು ದೃಷ್ಟಿಯಲ್ಲಿ ರಾಮಾಯಣವು ಸೀತೆಯ ಚರಿತ್ರೆಯೇ. 'ಸೀತಾಯಾಶ್ಚರಿತಂ' ಅವಳ ಪತಿಭಕ್ತಿ, ಸಹನೆ, ಗಾಂಭೀರ್ಯ, ದೈವಭಕ್ತಿ, ಇವೆಲ್ಲಾ ಭಾರತೀಯ ಸ್ತ್ರೀತ್ವದ ಪರಮ ಆದರ್ಶಗಳಾಗಿ ಇಂದಿಗೂ ಪೂಜಾರ್ಹವಾಗಿವೆ.

**ಸೀತೆಯ ಜನನ, ಬಾಲ್ಯ, ತವರು**

ಕಾವ್ಯಂ ರಾಮಾಯಣಂ ಕೃತ್ಸ್ನಂಸೀತಾಯಾಶ್ಚರಿತಂ ಮಹತ್
ಪೌಲಸ್ತ್ಯವಧಮಿತ್ಯೇವ ಚಕಾರ ಚರಿತವ್ರತಃ[೨]

ಎಂದು ವಾಲ್ಮೀಕಿ ತನ್ನ ಕಾವ್ಯಕ್ಕೆ ರಾಮಾಯಣವೆಂದೂ ಸೀತಾಚರಿತ್ರೆಯೆಂದೂ ರಾವಣ ವಧೆಯೆಂದು ಹೆಸರಿಟ್ಟನು. ಇವುಗಳಲ್ಲಿ ರಾಮಾಯಣವೆಂಬ ಹೆಸರು ಸಾಮಾನ್ಯವಾಗಿ ಪ್ರಚುರದಲ್ಲಿದೆ. ರಾಮನಲ್ಲಿರುವ ಗುಣಾತಿಶಯಗಳಿಗಿಂತ ಸೀತಾದೇವಿಯಲ್ಲಿದ್ದ ಪಾತಿವ್ರತ್ಯವೇ ಮೊದಲಾದ ಗುಣಾತಿಶಯಗಳು, ಲಂಕೆಯಲ್ಲಿದ್ದಾಗ ಅವಳು ತೋರಿಸಿದ ಪತಿಪ್ರೇಮ, ಧೈರ್ಯ ಮುಂತಾದ ಸದ್ಗುಣಗಳು ಹೆಚ್ಚು ಆಶ್ಚರ್ಯಜನಕವಾದವು. ರಾಮನ ಚರಿತ್ರೆಗಿಂತ ಸೀತೆಯ ಚರಿತ್ರೆಯೇ ಮಹತ್ತಾದುದು. ಆದ್ದರಿಂದಲೇ 'ಸೀತಾಯಾಶ್ಚರಿತಂ ಮಹತ್' ಎಂಬ ಪದಗಳು ಈ ಗ್ರಂಥಕ್ಕೆ ಹೆಚ್ಚು ಒಪ್ಪುತ್ತದೆ.

ಸೀತೆ ರಾಮಾಯಣದ ನಾಯಕಿ. ಈ ಗ್ರಂಥ 'ಸೀತಾಯಾಶ್ಚರಿತಂ'. ಆದರೂ ಸಹ ಜಾನಕಿಯ ಜನನದ ವೃತ್ತಾಂತ ಬಹಳ ಸಂಕ್ಷಿಪ್ತವಾಗಿ ಬರುತ್ತದೆ. ರಾಮನ ಜನನದ ವೃತ್ತಾಂತವನ್ನು ೧೧ ಸರ್ಗಗಳಲ್ಲಿ ತಂದ ವಾಲ್ಮೀಕಿ ಭೂಮಿಜೆಯ ಜನನದ ವೃತ್ತಾಂತವನ್ನು ಒಂದೇ ಸರ್ಗದಲ್ಲಿ ಜನಕನ ಬಾಯಿಯಿಂದ ತೇಲಿಸಿಬಿಡುತ್ತಾರೆ.[೩] ಜನಕರಾಜ ಶಿವಧನುಸ್ಸಿನ ಬಗ್ಗೆ ಕುತೂಹಲಿಗಳಾಗಿದ್ದ ರಾಮಲಕ್ಷ್ಮಣರಿಗೆ ಆ ಮಹಾಧನುಸ್ಸನ್ನು ಪರಿಚಯ ಮಾಡಿಸುತ್ತಾ ತನ್ನ ಮಗಳಾದ ಭೂಜಾತೆಯ ಬಗ್ಗೆ ಹೇಳುತ್ತಾನೆ. ಒಮ್ಮೆ ಜನಕ ಮಹಾರಾಜನು ಯಜ್ಞಕ್ಕಾಗಿ ಭೂಮಿಯನ್ನು ಉಳುತ್ತಿರುವಾಗ ನೇಗಿಲಗೆರೆಯಲ್ಲಿ ದೊರೆತವಳು. ಜನಕರಾಜನು ಈಕೆಯ

---

[೧] ವಾಲ್ಮೀಕಿ ರಾಮಾಯಣ, ಉ.ಕಾ. ಸುಬ್ಬರಾಯಾಚಾರ್, ಮೈಸೂರು ವಿ.ವಿ., ಪ್ರಚಾರ ಪುಸ್ತಕ ಮಾಲೆ, ಪ್ರಸಾರಂಗ, ೧೯೬೭.

[೨] ಕನ್ನಡ ವಾಲ್ಮೀಕಿ ರಾಮಾಯಣ ಸಂ.೧, ಪುಟ ೨೦, ಸರ್ಗ.೪

[೩] ತಂಬೂರಿ ಸಂಪ್ರದಾಯದ ರಾಮಾಯಣ ಸೀತೆಯ ಜನನ ವೃತ್ತಾಂತದಿಂದಲೇ ಆರಂಭವಾಗುತ್ತದೆ ಎಲ್ಲಿಯೂ ದಶರಥನ ಪುತ್ರಾಪೇಕ್ಷೆಯಾಗಲಿ ರಾಮಾಧಿಗಳ ಜನನ ವೃತ್ತಾಂತವಾಗಲಿ ಪ್ರಸ್ತಾಪವಾಗಿಲ್ಲ.

ಸಾಕುತಂದೆಯಾದ್ದರಿಂದ ಈಕೆಯ ಮತ್ತೊಂದು ಹೆಸರು 'ಜಾನಕಿ', ಜನಕರಾಜನ ಬಿರುದು ವಿದೇಹರಾಜ ಎಂಬುದರಿಂದ 'ವೈದೇಹಿ' ಎಂಬ ಹೆಸರೂ ಸಹ ಈಕೆಗೆ ಇದೆ. ಒಟ್ಟಿನಲ್ಲಿ ಸೀತೆ ಭೂಮಿಜೆ ಎಂಬುದು ಸ್ಪಷ್ಟ.

ಈಕೆಯ ಜನನವನ್ನು ಕುರಿತ ಹಲವು ಕಥೆಗಳು ಅಲ್ಲಲ್ಲಿ ದೊರೆಯುತ್ತವೆ. ವೇದವತಿಯೆಂಬುವಳೊಬ್ಬಳು ಮಹಾವಿಷ್ಣುವನ್ನು ಮದುವೆಯಾಗಬೇಕೆಂದು ತಪಸ್ಸು ಮಾಡುತ್ತಿದ್ದಳು. ರಾವಣನು ಸರ್ವಾಂಗ ಸುಂದರಿಯಾದ ಆಕೆಯನ್ನು ಕ್ಷಮಿಸಿ ಆಕೆಯ ಮುಡಿಯನ್ನು ಹಿಡಿದೆಳೆದನು. ಆಗ ಆಕೆಯು ಅವನನ್ನು ಅಲ್ಲಿಯೇ ಹಾಗೆಯೇ ದಹಿಸುವಂತಹ ತಪಶ್ಶಕ್ತಿಯುಳ್ಳವಳಾದರೂ ಸಹಿಸಿಕೊಂಡು ಮುಡಿಯನ್ನೇ ಕಿತ್ತೆಸೆದು ಅವನಿಗೆ ಮುಂದೆ ನಿನ್ನ ಕುಲವನ್ನೇ ತಿನ್ನುವ ನಿನ್ನ ಪಾಲಿನ ಮಾರಿಯಾಗುವೆನು ಎಂದು ಶಾಪಕೊಟ್ಟು ಅಗ್ನಿ ಪ್ರವೇಶ ಮಾಡಿದಳು ಆಕೆಯೇ ಸೀತೆಯಾದಳು ಎಂಬ ಕಥೆ ಇದೆ.

ಇನ್ನೊಂದು ಕಥೆಯಂತೆ ಸೀತೆಯು ರಾವಣನಿಗೆ ಮಂಡೋದರಿಯಲ್ಲಿ ಹುಟ್ಟಿದ ಮಗಳು. ಈಕೆಯು ಹುಟ್ಟುತ್ತಲೂ ಜೋಯಿಸರು ಈಕೆಯಿಂದ ಲಂಕೆಯು ಹಾಳಾಗುವುದೆಂದು ಹೇಳಿದರು. ಅದಕ್ಕೋಸ್ಕರ ರಾವಣಾಸುರನು ಆ ಮಗುವನ್ನು ಪೆಟ್ಟಿಗೆಯಲ್ಲಿಟ್ಟು ಸಮುದ್ರದೊಳಗೆ ಹಾಕಿದನು. ಆ ಪೆಟ್ಟಿಗೆಯು ಹಾಗೆಯೇ ತೇಲುತ್ತ ಬಂದು ಜನಕರಾಜನಿಗೆ ಸಿಕ್ಕಿತು. ಆತನು ಅದರಲ್ಲಿದ್ದ ಮಗುವನ್ನು ಕಾಪಾಡಿದನು. ಆಕೆಯೇ ಸೀತೆ.

ಮತ್ತೊಂದು ಕಥೆಯೆಂದರೆ ಸೀತೆಯ ಹಿಂದಿನ ಜನ್ಮದಲ್ಲಿ ಅಂಬರೀಷನೆಂಬ ದೊರೆಯ ಮಗಳು ಶ್ರೀಮತಿ ಎಂಬವಳಿದ್ದಳು ನಾರದ ಮತ್ತು ಪರ್ವತ ಎಂಬ ಋಷಿಗಳು ಆಕೆಯನ್ನು ಮದುವೆ ಮಾಡಿಕೊಳ್ಳಬೇಕು ಎಂದು ಪ್ರಯತ್ನ ಮಾಡಿದರು. ಇವರಿಬ್ಬರೂ ಮಹಾವಿಷ್ಣುವಿನ ಬಳಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಹೋಗಿ "ಅವನ ಮುಖವು ಕೋಡಗದಂತಾಗಲಿ" ಎಂದು ಇವನೂ "ಇವನ ಮುಖವು ಕರಡಿಯಂತಾಗಲಿ" ಎಂದು ಅವರು ಪ್ರಾರ್ಥಿಸಿದರು. ಮಹಾವಿಷ್ಣುವು ಇಬ್ಬರಿಗೂ ಹಾಗೇ ವರವನ್ನು ಕೊಟ್ಟು ಇವರಿಬ್ಬರಲ್ಲಿ ಯಾರನ್ನೂ ವರಿಸಲಾರದೆ ವ್ಯಾಧಿಸುತ್ತಿದ್ದ ಶ್ರೀಮತಿಯನ್ನು ತಾನೇ ವರಿಸಿದನು. ಆಗ ಹೀಗೆ ಮೋಸ ಮಾಡಿದನೆಂದು ಕೋಪಗೊಂಡು ಋಷಿಗಳು ವಿಷ್ಣುವಿಗೆ ಪತ್ನೀವಿರಹದ ಅನುಭವವಾಗಲೆಂದು ಶಾಪಕೊಟ್ಟರು. ಮುಂದೆ ಶ್ರೀಮತಿಯು ವಿಷ್ಣುವೇ ತನ್ನ ಪತಿಯಾಗಲೆಂದು ತಪಸ್ಸು ಮಾಡಿದಳು. ಹಾಗೇ ತಪಸ್ಸು ಮಾಡುತ್ತಿದ್ದಾಗ ರಾವಣನು ಅವಳನ್ನು ಕಂಡು ಕಾಮಿಸಿದನು. ಅವಳು ಆತನಿಗೆ ಶಾಪಕೊಟ್ಟು ಅಗ್ನಿ ಪ್ರವೇಶ ಮಾಡಿದಳು. ಅವಳೇ ಮುಂದೆ ಸೀತೆಯಾದಳು. ಆಗ ಪತಿಪತ್ನಿಯರಿಬ್ಬರೂ ಋಷಿ ಶಾಪದಿಂದ ವಿಯೋಗ ದುಃಖವನ್ನು ಅನುಭವಿಸಿದರು.

ಸೀತೆಗೂ ರಾಮನಿಗೂ ವಿರಹವಾಗುವುದಕ್ಕೆ ಕಾರಣವಾಗಿ ಇನ್ನೂ ಒಂದು ಕಥೆಯನ್ನು ಹೇಳುತ್ತಾರೆ. ಭೃಗುಪತ್ನಿಯು ದೇವವೈರಿಗಳಾದ ದಾನವರಿಗೆ ಆಶ್ರಯವನ್ನು ಕೊಟ್ಟು ಕಾಪಾಡಿದಳು. ಅದಕ್ಕಾಗಿ ವಿಷ್ಣುವಿಗೆ ಕೋಪಬಂದು ತನ್ನ ಚಕ್ರದಿಂದ ಆಕೆಯ ತಲೆಯನ್ನು ತೆಗೆದುಬಿಟ್ಟನು. ಅದಕ್ಕಾಗಿ ಭೃಗುವಿಗೆ ಕೋಪಬಂದು 'ನನ್ನ ಪತ್ನಿಯನ್ನು ನಿಷ್ಕಾರಣವಾಗಿ ಕೊಂದೆಯಾಗಿ ಮುಂದೆ ನೀನೂ ಪತ್ನಿ ವಿರಹವನ್ನು ಅನುಭವಿಸು' ಎಂದು ಶಾಪಕೊಟ್ಟನು.

ಆದ್ದರಿಂದ ರಾಮಾವತಾರದಲ್ಲಿ ವಿಷ್ಣುವಿಗೆ ಪತ್ನಿ ವಿರಹವಾಯಿತು.[೧] ಹೀಗೆ ಸೀತೆಯ ಜನನದ ಬಗ್ಗೆ, ಸೀತಾರಾಮರ ಸಂಬಂಧದ ಬಗ್ಗೆ ಹಲವು ಕಥೆಗಳು ಪ್ರಚಲಿತದಲ್ಲಿವೆ.

ನೇಗಿಲಗೆರೆಯಲ್ಲಿ ದೊರೆತ ಹೆಣ್ಣು ಮಗುವನ್ನು ಮಕ್ಕಳಿಲ್ಲದ ಜನಕರಾಜ ಮತ್ತು ಸುನಯನೆ ತಮ್ಮ ಮಗಳೆಂದೆ ತಿಳಿದು ಸಲಹಿದಳು. ಸೀತೆ ತೊಟ್ಟಿಲ ಶಯನವನ್ನು ಮುಗಿಸಿ ಅಂಬೆಗಾಲಿಕ್ಕುತ್ತ. ಯೋಗಭೋಗಗಳಿಗೆ ನೆಲೆಯಾದ ವಿದೇಹದ ಅರಮನೆಯನ್ನು ಬೆಳಗಿದಳು. ತನ್ನ ಆಟ, ಪಾಠ, ಶಿಶುಲೀಲೆ ಬಾಲ್ಯದ ಮೋಡಿಯಿಂದ ಇನ್ನೂರೈವತ್ತು ಮಾತೆಯರ ವೈವಿಧ್ಯಮಯ ಪೋಷಣೆಯಲ್ಲಿ ಬೆಳೆದಳು. ಈಕೆಗೆ ಸದ್ಗುಣಗಳ ಮೂರ್ತಿ ಊರ್ಮಿಳೆ ಜೊತೆಯಾದಳು. ಸೀತೆ-ಊರ್ಮಿಳೆಯರು ಶಿಸ್ತಿನ ಜೀವನಕ್ಕೆ ಪಾದಾರ್ಪಣೆ ಮಾಡಿದರು. ಇವರು ಕ್ಷತ್ರಿಯ ಕನ್ಯೆಯರಾದ್ದರಿಂದ ಕ್ಷೇತ್ರ ವಿದ್ಯಾರ್ಜನೆ ಮಾಡಲು ಪ್ರಾರಂಭ ಮಾಡಿದರು. ಯಾಜ್ಞವಲ್ಕ, ಮೈತ್ರೇಯಿ, ಗಾರ್ಗಿ, ಕಾತ್ಯಾಯಿನಿ ಮೊದಲಾದವರು ಜನಕರಾಜನು ನಡೆಸುತ್ತಿದ್ದ ಯಾಗಗಳಲ್ಲಿ ಭಾಗವಹಿಸುತ್ತಿದ್ದರು. ಅಲ್ಲದೆ ಮಹಾಸತಿಯಾದ ಅಹಲ್ಯೆಯ ಪುತ್ರ ಶಾತನಂದನೇ ಅರಮನೆಗೆ ಕುಲಪುರೋಹಿತ, ಇಂಥ ಮಹಾತ್ಮೆಯುಳ್ಳ ಪರಿಸರದಲ್ಲಿ ಜಾನಕಿ ಅರವತ್ತು ನಾಲ್ಕು ವಿದ್ಯೆಗಳಲ್ಲೂ ಪಂಡಿತೆಯಾದಳು. ಶಯ್ಯಾಗಾರ ಶೃಂಗಾರ, ಕಾಮಕಲೆ, ಸಂಗೀತ, ಚಿತ್ರಕಲೆ ಇವುಗಳ ಜ್ಞಾನವು ಸಾಕಷ್ಟಿತ್ತು. ಅರಮನೆಯ ವಾಸದಲ್ಲಿ ಇವಳ ಇನ್ನೂರೈವತ್ತು ಮಾತೆಯರ ಸವತಿ ಮಾತ್ಸರ್ಯದ ಗುಪ್ತ ಸ್ಫೋಟವಾಗುತ್ತಿದ್ದುದನ್ನು ಗಮನಿಸುತ್ತಿದ್ದಳು. ಯಜ್ಞವಲ್ಕಾದಿಗಳ ಬ್ರಹ್ಮವಿದ್ಯೆಯ ವಾದಗಳು ಅವಳ ಕರ್ಣಗಳಲ್ಲಿ ಗುಯ್ ಗುಡುತ್ತಿದ್ದವು. ತಾನು ಎಂತಹ ಜೀವನವನ್ನು ಬಾಳಬೇಕು ಎಂಬುದರ ಬಗ್ಗೆ ಆಕೆ ಚಿಂತಿಸುತ್ತಿದ್ದಳು. ಗಾರ್ಗೇಯಿಯಂತೆ ಬ್ರಹ್ಮವಾದಿನಿಯಾಗಿ ಬಾಳುವುದೇ? ಅಥವಾ ಮೈತ್ರೇಯಿ, ಕಾತ್ಯಾಯಿನಿಯರಂತೆ ದಾಂಪತ್ಯ ಜೀವನವನ್ನು ನಡೆಸುವುದೇ? ಧರ್ಮರಕ್ಷಣೆಗಾಗಿಯೇ ಹುಟ್ಟಿರುವ ಕ್ಷತ್ರಿಯರು ಬ್ರಾಹ್ಮಣ, ವೈಶ್ಯ, ಶೂದ್ರರ ರಕ್ಷಣೆ ಮಾಡಬೇಕಾಗಿರುವುದರಿಂದ ಬ್ರಹ್ಮವಾದಿನಿಯಾಗಿ ಬಾಳುವುದು ಸರಿಯೆ? ದಾಂಪತ್ಯ ಜೀವನದಲ್ಲಿ ಬ್ರಹ್ಮಚರ್ಯೆಯನ್ನು ಸತಿಪತಿಯರು ಆಚರಿಸುವುದು ಸಾಧ್ಯವೆ? ಅಂತಹ ಆಚರಣೆ ಸರ್ವೋನ್ನತ ತಪಸ್ಸಲ್ಲವೇ ಎಂಬುದರ ಬಗ್ಗೆ ಮಹತ್ತಾಗಿ ಚಿಂತನೆ ಮಂಥನಗಳು ಆಕೆಯ ಮನಸ್ಸಿನಲ್ಲಿ ನಡೆಯುತ್ತಿದ್ದವು. ಮುಂದೆ ರಾಮನೊಡನೆ ವನವಾಸವ್ರತ, ಮತ್ತು ದಾಂಪತ್ಯ ಜೀವನದಲ್ಲಿ ಬ್ರಹ್ಮಚಾರ್ಯವ್ರತವನ್ನು ಕೈಗೊಳ್ಳುವುದಕ್ಕೆ ಬೇಕಾದ ಮನೋಭೂಮಿಕೆ ಇಲ್ಲೆ ಸಿದ್ಧಗೊಂಡಂತೆ ಕಾಣುತ್ತದೆ.

ಸೀತೆಯ ವಿದ್ಯಾಭ್ಯಾಸವು ಅಸದೃಶವಾಗಿಯೇ ನಡೆಯಿತು. ಅಂತೆಯೇ ಅವಳಿಗೆ ಯೌವನವೂ ಕವಿಯಿತು. ಜನಕರಾಜನಿಗೆ ಚಿಂತೆ ಆವರಿಸಿತು. ಆಕೆಗೆ ಮದುವೆ ಮಾಡಲು ನಿಶ್ಚಯಿಸಿ ಆಕೆಯನ್ನು ವೀರಪಣವನ್ನಾಗಿ ಘೋಷಿಸಿದನು. ಶಿವಧನುವಿನ ಗರ್ವಭಂಗ ಮಾಡುವುದನ್ನು ಮಾತಾಪಿತೃಗಳು ಬಹುಸಂಕಟದಿಂದ ನಿರೀಕ್ಷಿಸುತ್ತಿದ್ದರು. ಮೈಥಿಲಿಯೂ ಈ ಸಂಕಟದಲ್ಲಿ ಪಾಲ್ಗೊಂಡಿದ್ದಳು. ತಾಯಿ ಮಗಳು, ಕಣಿಯವರಲ್ಲಿ ಭವಿಷ್ಯದ ಪ್ರಸ್ತಾಪ ಮಾಡುತ್ತಾ ದೊಡ್ಡದೊಂದು ನಿರೀಕ್ಷೆಯಲ್ಲಿ ಕಾಯುತ್ತಿದ್ದರು. ಸೀತೆಯು ಸಕಲ ಲಕ್ಷಣ

---

[೧] ಮಹಾನುಭವ ರಾವಣ ಮತ್ತು ಪುರುಷೋತ್ತಮ ಶ್ರೀರಾಮ, ಸೀತಾಸುತ, ಸೀತಾಸುತ ಪ್ರಕಾಶನ, ಮಂಡ್ಯ ೧೯೮೫.

ಸಂಪನ್ನಳಾಗಿದ್ದರೂ ಪರಮಪುರುಷನಾದ ವರ ಮಾತ್ರ ಬರಲಿಲ್ಲ. ಕನ್ಯಾಪಿತನು ದೇವೇಂದ್ರನಿಗೆ ಸಮಾನನಾಗಿದ್ದರೂ ಲೋಕದಲ್ಲಿ ಅವನಿಗೆ ತಿರಸ್ಕಾರ ತಪ್ಪಿದ್ದಲ್ಲ. ತನಗೆ ಸಮಾನರಾದ ಜನರಿಂದಲೂ ಕೆಲವು ವೇಳೆ ಕೆಳಮಟ್ಟದವರಿಂದಲೂ ಕನ್ನೆಯ ತಂದೆಗೆ ಅವಮಾನ ಸಂಭವಿಸುತ್ತದೆ. ತನ್ನ ತಂದೆಗೆ ಅವಮಾನ ಕರವಾದ ಸನ್ನಿವೇಶ ಒದಗಿತಲ್ಲ, ಸಾಲದ್ದಕ್ಕೆ ನಾನು ಅಯೋನಿಜೆ ಎಂದು ಅನಸೂಯೆ ದರ್ಶನದಲ್ಲಿ ಹೇಳಿಕೊಳ್ಳುತ್ತಾಳೆ. ಜನಕ ಮಹಾರಾಜನು ಈ ಮುದ್ದು ಮಗಳನ್ನು ವೀರಪಣವಾಗಿ ಇಟ್ಟು ತಪ್ಪು ಮಾಡಿದೆ ಅವಳನ್ನು ಬ್ರಹ್ಮಚಾರಿಣಿಯನ್ನಾಗಿಯೇ ಉಳಿಸಿಕೊಳ್ಳುವ ಅವಸ್ಥೆ ಬಂದಿತಲ್ಲ. ಕ್ಷತ್ರಿಯ ಸ್ತ್ರೀ ಬ್ರಹ್ಮವಾದನಿಯಾಗಿ ಸನ್ಯಾಸಿಯಾಗುವುದು ಕ್ಷತ್ರಿಯ ಕುಲದಲ್ಲೂ ನಮ್ಮ ವಂಶದಲ್ಲೂ ನಡೆದು ಬಂದಿಲ್ಲವಲ್ಲ ಎಂದು ಚಿಂತಿಸುತ್ತಿದ್ದನು. ತಂದೆ ತಾಯಿಗಳ ಮುಂದೆ ಓಡಾಡುವುದರಿಂದ ಅವರಿಗೆ ಚಿಂತಾಗ್ನಿಯು ಪ್ರಜ್ವಲಿಸುವುದು ಎಂದು ತಿಳಿದು ಅವರ ಮುಂದೆ ಕಾಣಿಸಿಕೊಳ್ಳುವುದನ್ನು ಸಾಧ್ಯವಾದಷ್ಟು ಕಡಿಮೆ ಮಾಡಿದಳು. ಹತ್ತಿರದಲ್ಲಿ ಅಹಲ್ಯೆಯ ಆಶ್ರಮವಿದ್ದದರಿಂದ ಅವಳು ಕಥೆಯನ್ನು ಕೇಳಿ ತಾಯಿಯ ಜೊತೆ ತೀವ್ರ ಚರ್ಚೆ ಮಾಡುತ್ತಿದ್ದಳು. ತಾಯಿ ಮಗಳು ಜ್ಯೋತಿಷ್ಯರನ್ನು ಸಾಮುದ್ರಿಕಾ ಪಂಡಿತರನ್ನು ಕರೆದು ಭವಿಷ್ಯ ಕೇಳುತ್ತಿದ್ದರು. ಸೀತೆಗೆ ವನವಾಸ ಯೋಗವಿದೆ ಎಂದು ಎಲ್ಲಾ ಕಣಿಯವರು ಹೇಳುತ್ತಿದ್ದರು. ಸೀತೆಗೆ ವನವಾಸ ಯೋಗವಿದ್ದುದರಿಂದಲೇ ಮುಂದೆ ರಾಮನಿಗೆ ವನವಾಸ ಕಾರಣವಾಯಿತು.

**ವಿವಾಹ**

ಭೂಮಿಜೆಯನ್ನು ವೀರಪಣವನ್ನಾಗಿಟ್ಟು ಕೆಟ್ಟನೆಂದು ಜನಕ ಮಹಾರಾಜ ಚಿಂತಿಸುತ್ತಿದ್ದನು. ವೀರವ್ರತಧಾರಿಯಾದ ಯಾವ ಧೀರನೂ ಬಾರದೆ ಈ ಶಿವಧನಸ್ಸು ಜಡವಾಗಿಬಿಟ್ಟಿದೆ. ಇದು ನನ್ನ ದೌರ್ಭಾಗ್ಯವೋ ಅಥವಾ ನನ್ನ ಮಗಳ ದುರದೃಷ್ಟವೋ ಎಂದು ಹಲುಬುತ್ತಿದ್ದಾಗ ವಿಶ್ವಾಮಿತ್ರ ಮಹರ್ಷಿಗಳು ಆಗಮಿಸುತ್ತಾರೆ. ಆತಿಥ್ಯಾದಿ ಸತ್ಕಾರಗಳು ಮುಗಿದ ಮೇಲೆ ವಿಶ್ವಾಮಿತ್ರರು ತಮ್ಮೊಡನೆ ಬಂದಿದ್ದ ರಾಮಲಕ್ಷ್ಮಣರ ಪರಿಚಯ ಮಾಡಿಕೊಡುತ್ತಾರೆ. 'ಈ ರಾಜಕುಮಾರನಾದ ಶ್ರೀರಾಮನು ನಿನ್ನ ಶಿವಧನುಸ್ಸನ್ನು ವೀಕ್ಷಿಸಬೇಕೆಂಬ ಕುತೂಹಲದಲ್ಲಿದ್ದಾನೆ ಅದನ್ನು ತೋರಿಸು' ಎಂದು ಜನಕರಾಜನಿಗೆ ಹೇಳುತ್ತಾರೆ. ಆಗ ಜನಕರಾಜ ಶಿವಧನುಸ್ಸನ್ನು ತರಿಸಿಟ್ಟನು. ಶ್ರೀರಾಮ ತಾನೂ ಪ್ರಯತ್ನಿಸಬಹುದೇ ಎಂಬ ಭಾವದಿಂದ ಗುರುಗಳತ್ತ ನೋಡಿದನು. ಗುರುಗಳ ಒಪ್ಪಿಗೆ ಪಡೆದು ಧನುಸ್ಸನ್ನೆತ್ತಿ ಹೆದೆಕಟ್ಟಲು ಉದ್ಯುಕ್ತನಾದಾಗ ಬಿಲ್ಲು ಮುರಿದು ಬಿತ್ತು. ಬಿಲ್ಲು ಮುರಿದ ರಾಮನಿಗೆ ಮಗಳನ್ನು ಕೊಡಲು ಜನಕರಾಜ ತೀರ್ಮಾನಿಸಿದನು. ಶ್ರೀರಾಮನ ತಂದೆ-ತಾಯಿಗಳನ್ನು ಕರೆತರಲು ಅಯೋಧ್ಯೆಗೆ ಆಳುಗಳನ್ನು ಕಳುಹಿಸಲಾಯಿತು. ಸಕಲ ಪರಿವಾರ ಸಮೇತ ಭರತ ಶತ್ರುಘ್ನರ ಸಮೇತ ದಶರಥ ಮಹಾರಾಜ ಬಂದನು.

ವಿವಾಹಪೂರ್ವ ಕರ್ಮಗಳನ್ನೆಲ್ಲಾ ಮುಗಿಸಿ ಪಾಲ್ಗುಣ ಶುದ್ಧ ಪೂರ್ಣಿಮೆಯಂದು ವೀರಕಂಕಣವನ್ನು ತೊಟ್ಟಳು ಸೀತೆ. ಅನಂತರ ಜನಕನು ಸರ್ವಾಲಂಕಾರ ಭೂಷಿತಳಾದ ಜಾನಕಿ ದೇವಿಯನ್ನು ಕರೆತಂದು ಅಗ್ನಿಯ ಸಮಕ್ಷಮದಲ್ಲಿ ಶ್ರೀರಾಮನಿಗೆ ಅಭಿಮುಖವಾಗಿ ನಿಲ್ಲಿಸಿದನು.

ಇಯಂ ಸೀತಾ ಮಮಸುತಾ ಸಹಧರ್ಮಚರೀ ತವ
ಪ್ರತೀಚ್ಛ ಚೈನಾಂ ಭದ್ರಂ ತೇ ಪಾಣಿಂ ಗೃಹ್ಣೀಷ್ವ ಪಾಣಿನಾ
ಪತಿವ್ರತಾ ಮಹಾಭ್ರಾಗಾ ಛಾಯೇವಾನುಗತಾ ಸದಾ
ಇತ್ಯುಕ್ತ್ವಾ ಪ್ರಕ್ಷಿಪದ್ರಾಜಾ ಮಂತ್ರಪೂತಂ ಜಲಂ ತದಾ

'ನನ್ನ ಮಗಳಾದ ಈ ಸೀತೆಯು ನಿನಗೆ ಸಹಧರ್ಮಚಾರಿಣಿಯಾಗಿರುವಳು. ನಿನಗೆ ಮಂಗಳವಾಗಲಿ ನಿನ್ನ ಕೈಯಿಂದ ಈಕೆಯ ಕೈಯನ್ನು ಹಿಡಿದು ಇವಳನ್ನು ಪರಿಗ್ರಹಿಸು ಈಕೆಯು ಪತಿವ್ರತೆ. ಮಹಾಭಾಗ್ಯಶಾಲಿನಿ ನೆರಳಿನಂತೆ ಅನವರತಾಗಿ ನಿನ್ನೊಡನೆ ಇರುವಳು' (ಬಾಲಕಾಂಡ, ಸೀತಾಕಲ್ಯಾಣ, ಘಟ್ಟವು, ಪುಟ ೧೬೮) ಅನಂತರ ಲಕ್ಷ್ಮಣನಿಗೆ ಊರ್ಮಿಳೆಯನ್ನು, ಭರತನಿಗೆ ಮಾಂಡವಿಯನ್ನು, ಶತ್ರುಘ್ನನಿಗೆ ಶ್ರುತಕೀರ್ತಿಯನ್ನು ಮದುವೆ ಮಾಡಿಕೊಡಲಾಯಿತು.

ವಿವಾಹದ ಬಳಿಕ ನವಮಧುಮಕ್ಕಳನ್ನು ಅವರ ಸಮೇತ ಧನಕನಕಾದಿಗಳನ್ನು, ದಾದಿಯರನ್ನು ಅಯ್ಯೋಧ್ಯಾನಗರಿಯಿಂದ ಬಂದಿದ್ದ ದಶರಥನ ಬಂಧುಬಳಗ ಋಷಿ ಸಮೂಹ ಸೈನ್ಯಾದಿಗಳನ್ನು ಜನಕನು ಬೀಳ್ಕೊಟ್ಟನು. ಪ್ರಯಣ ಮಧ್ಯದಲ್ಲಿ ಪ್ರಚಂಡ ಗಾಳಿ ಬೀಸಿತು. ಭೂಮಿ ನಡುಗಿತು ಅದರೊಳಗೆ ಗಂಡುಗೊಡಲಿಯನ್ನು ಹೆಗಲ ಮೇಲಿರಿಸಿದ, ಜಾಜ್ವಲ್ಯಮಾನವಾದ ಧನಸ್ಸನ್ನು ಕೈಲಿ ಹಿಡಿದ ಪರಶುರಾಮನು ಕಂಡನು. ಅಲ್ಲಿ ನೆರೆದಿದ್ದ ಸ್ತ್ರೀ ಸಮೂಹ, ಸೈನ್ಯ, ಭಯಗ್ರಸ್ತರಾಗಿ ನಿಶ್ಚೇತನರಾಗಿದ್ದರು. ಜಮದಗ್ನಿಯ ಪುತ್ರ ಶ್ರೀರಾಮನತ್ತ ತಿರುಗಿ 'ಎಲೈ ರಾಮನೇ, ಎಲೈ ದಶರಥ ಪುತ್ರನಾದ ರಾಮನೇ, ನಿನ್ನ ಪರಾಕ್ರಮವು ಅದ್ಭುತವಾದುದೆಂದು ಕೇಳಿರುತ್ತೇನೆ. ನೀನು ಶಿವಧನಸ್ಸನ್ನು ಭೇದಿಸಿದ ವಿಚಾರವೆಲ್ಲವೂ ನನಗೆ ತಿಳಿದು ಬಂತು. ನೀನು ಹಾಗೆ ಧನುಸ್ಸನ್ನು ಭೇದಿಸಿದುದು ಅದ್ಭುತವೂ ಯೋಚಿಸಲು ಅಸಾಧ್ಯವಾದುದೂ ಆಗಿದೆ. ಆ ಸಮಾಚಾರವನ್ನು ಕೇಳಿ ನಾನು ಬೇರೊಂದು ಶುಭಕರವಾದ ಧನುಸ್ಸನ್ನು ಹಿಡಿದುಕೊಂಡು ಬಂದಿರುತ್ತೇನೆ. ಇದನ್ನು ಬಾಣದಿಂದಲೇ ಆರೋಪಣೆ ಮಾಡಿ ನಿನ್ನ ಬಲವನ್ನು ತೋರಿಸು. ಎಲೈ ರಾಘವ ಈ ಧನುಸ್ಸನ್ನು ಆರೋಪಣೆ ಮಾಡುವುದರಲ್ಲಿ ನಿನ್ನ ಬಲವನ್ನು ನೋಡಿ ಅನಂತರ ಶ್ಲಾಘನೀಯವಾದ ಪರಾಕ್ರಮವುಳ್ಳ ನಿನಗೆ ದ್ವಂದ್ವಯುದ್ಧವನ್ನು ಕೊಡುವೆನು' ಎಂದು ಸವಾಲೆಸೆದ ಪರಶುರಾಮನನ್ನು ಜಯಿಸಿ ಅವನ ತಪೋಧನವನ್ನೆಲ್ಲಾ ಸೂರೆಗೊಂಡನು ಸೀತಾಪತಿ. ಪತಿಯ ಪರಾಕ್ರಮ ಪ್ರದರ್ಶನದಲ್ಲಿ ಜನಕಸುತೆಗೆ ವಿಶ್ವಾಸ ಮೂಡಿತು. ಎಲ್ಲರೂ ಶವಸಮಾನರಾಗಿದ್ದಾಗ ವೈದೇಹಿಯು ವೀರಶಾಂತಿಯನ್ನು ವ್ಯಕ್ತಪಡಿಸಿದ್ದನ್ನು ನೋಡಿ ಅವಳು ಕ್ಷೇತ್ರ ತೇಜಸ್ಸಿನ ಮೂರ್ತಿಯೆಂದು ಹರ್ಷಗೊಂಡನು. ಇದರಿಂದ ಪಾರಾದ ಮೇಲೆ ಶಾಂತರಾಗಿ ಅಯೋಧ್ಯಾನಗರಿಯತ್ತ ಪಯಣ ಬೆಳೆಸಿದರು.

ವೀರಶುಲ್ಕವಾಗಿ ಪಡೆದ ಸೀತೆಯೊಡನೆ ರಾಮನು ಅನೇಕ ಋತುಗಳ ಕಾಲ ವಿಹರಿಸಿದನು. ಆಕೆಯ ಸೌಂದರ್ಯ ರೂಪಗಳಿಗಿಂತಲೂ ಹೆಚ್ಚಾಗಿ ಆಕೆಯ ಸದ್ಗುಣಗಳಿಂದ ಅವರಿಬ್ಬರ ನಡುವೆ ಪ್ರೇಮವೂ ವೃದ್ಧಿಹೊಂದುತ್ತಿತ್ತು. ರಾಮನು ಆಕೆಯನ್ನು ಎಷ್ಟು ಪ್ರೀತಿಸುತ್ತಿದ್ದನೋ ಅದಕ್ಕೆ ಇಮ್ಮಡಿಯಾದ ಪ್ರೀತಿಯನ್ನು ಸೀತೆ ಹೊಂದಿದ್ದಳು. ಸೀತೆಯ ಮನಸ್ಸಿನಲ್ಲಿರುವ ವಿಚಾರವನ್ನು ಅದು ಸ್ಪಷ್ಟವಾಗಿರಲಿ ಮನಸ್ಸಿನಲ್ಲಿಯೇ ಇರಲಿ ರಾಮನು

ಅರಿತುಬಿಡುತ್ತಿದ್ದನು. ಆತನ ಮನೋಗತವನ್ನು ದೇವತಾಸದೃಶಳಾಗಿ ಲಕ್ಷ್ಮಿಯಂತೆ ರೂಪ ಸಂಪನ್ನಳಾದ ಜನಕಾತ್ಮಜೆಯಾದ ಸೀತೆಯು ಮತ್ತೂ ಚೆನ್ನಾಗಿ ಅರಿತುಬಿಡುತ್ತಿದ್ದಳು. ಈ ಪ್ರಕಾರವಾಗಿ ಈ ಅನ್ಯೂನ್ಯಮೂರ್ತಿಗಳು ರಾರಾಜಿಸಿದರು.

**ಅಯೋಧ್ಯಕಾಂಡ**

ಸೀತಾರಾಮರು ವಿವಾಹವಾದ ಬಳಿಕ ಹಲವು ಋತುಗಳ ಕಾಲ ಅರಮನೆಯಲ್ಲಿ ಸುಖದಿಂದ ಕಾಲ ಕಳೆದರು. ಪತಿಯ ಸರ್ವಕರ್ಮಗಳಲ್ಲೂ ತಾನು ಸಮಭಾಗಿಯೆಂಬುದೇ ಗೃಹಿಣಿಯ ಧರ್ಮ ಎಂಬುದನ್ನು ಸೀತೆ ಅರಿತಿದ್ದಳು. ಸ್ತ್ರೀ ಪುರುಷನಿಗೆ ಸಮಾನವಾಗಿ ವರ್ತಿಸಬೇಕು. ದಾಸಿಯೂ ಆಗಬಾರದು. ಸ್ವತಂತ್ರಳೂ ಆಗಬಾರದು ಪತಿವ್ರತೆಯರೇ ಇಲ್ಲವೆಂಬ ಭಾವನೆಯನ್ನು ಅಳಿಸುವುದು, ಹೆಣ್ಣು ಅಬಲೆಯೂ ಹೌದು, ಸಬಲೆಯೂ ಹೌದು. ಬ್ರಹ್ಮಚರ್ಯಾಶ್ರಮವನ್ನು ಪುರುಷರಂತೆ ಸ್ತ್ರೀಯರೂ ಆಚರಿಸಬೇಕು. ಏಕಪತಿ ವ್ರತಾಚರಣೆಯಲ್ಲಿರುವುದು, ಪುರುಷನೂ ಏಕಪತ್ನಿ ವ್ರತಸ್ಥನಾಗಿರುವಂತೆ ಪ್ರಚೋದಿಸಿ ಸುಧಾರಿಸುವುದು, ಸ್ತ್ರೀ ಧರ್ಮೋದ್ಧಾರಕ್ಕಾಗಿ ಶ್ರಮಿಸಿ ಆದರ್ಶ ಸತಿಯಾಗುವುದು, ಕೊಟ್ಟು ತಂದ ಕುಲಗಳ ಕೀರ್ತಿಯನ್ನು ಕಾಪಾಡಿ ವೃದ್ಧಿಗೊಳಿಸುವುದು, ವೀರನನ್ನು ಕೂಡಿದರೆ ವೀರಪತ್ನಿಯಾಗೇ ಬಾಳಬೇಕೆಂಬುದು, ಇತ್ಯಾದಿ ವಿಚಾರಗಳು ಸೀತೆಯ ಹೃನ್ಮನಾಕಾಶದಲ್ಲಿ ತಾಂಡವವಾಡುತ್ತಿದ್ದವು. ಹೀಗೆ ಸೀತೆಯ ಗ್ರಹಸ್ಥಾಶ್ರಮದ ಅರಮನೆಯ ಜೀವನ ಉರುಳುತ್ತಿತ್ತು.

ಸೀತೆಗೆ ವನವಾಸ ಯೋಗವಿದೆಯೆಂದು ಜ್ಯೋತಿಷ್ಯರು ಹೇಳಿದ್ದರು. ಆದರೆ ಯಾವ ರೀತಿ ಪ್ರಸ್ತಾಪವಾಗುತ್ತದೆ ಎಂಬುದರ ಬಗ್ಗೆ ಆಕೆಗೆ ಕುತೂಹಲವಿತ್ತು. ವನವಾಸ ಯೋಗವು ಪ್ರಜಾಭಿಪ್ರಾಯದಿಂದಲೊ, ಸವತಿ ಮಾತ್ಸರ್ಯದಿಂದಲೊ ಅಥವಾ ಸ್ವಪ್ರೇರಣೆಯಿಂದಲೊ ಆಗಬೇಕಾದ್ದೆ. ಇಲ್ಲದಿದ್ದರೆ ಶತ್ರುಗಳ ದುರಾಕ್ರಮಣದಿಂದ ಕಾರ್ಯಸಾಧನೆಯಾಗಬೇಕು. ಅಥವಾ ಭ್ರಾತೃಕಲಹದಿಂದ ಶ್ರೀರಾಮನು ರಾಜ್ಯತ್ಯಾಗಿಯಾಗಿ ಕೋಸಲವನ್ನು ಬಿಡುವುದರಿಂದ ವನವಾಸ ಪ್ರಾಪ್ತಿಯಾಗುವುದೋ ತಿಳಿಯದಾಗಿತ್ತು ಸೀತೆಗೆ. ಅಂತು ಎಲ್ಲದರಲ್ಲೂ ತಾನು ಸಮಭಾಗಿನಿ ಎಂದು ಅರಿತು ಪ್ರತಿಗಳಿಗೆಯಲ್ಲೂ ಅರಮನೆಯ ಆಗು ಹೋಗುಗಳನ್ನು ಬಹುತೀಕ್ಷ್ಣವಾಗಿ ಪರೀಕ್ಷಿಸುತ್ತಿದ್ದಳು.

ಒಂದು ದಿನ ದಶರಥ ಮಹಾರಾಜನು ಭರತನು ಅಯೋಧ್ಯೆಯಲ್ಲಿಲ್ಲದಿರುವಾಗ ಹಿರಿಯ ಪುತ್ರನಾದ ಶ್ರೀರಾಮನಿಗೆ ಯುವರಾಜ ಪಟ್ಟಾಭಿಷೇಕವನ್ನು ಮಾಡಬೇಕೆಂದು ನಿಶ್ಚಯಿಸಿದನು. ಸುಖ ಸಂಸಾರದಲ್ಲಿ ತೇಲುತ್ತಿದ್ದ ಸೀತೆಗೆ ಈ ವಿಷಯ ಇಮ್ಮಡಿಯಾದ ಆನಂದವನ್ನು ಉಂಟು ಮಾಡಿತು. ರಾಮ ಪಟ್ಟಾಭಿಷೇಕ ಸಕಲ ಸಿದ್ಧತೆಗಳು ನಡೆದವು. ಅಯೋಧ್ಯ ನಗರಿ ಯುವರಾಜ ಪಟ್ಟಾಭಿಷೇಕದ ಆನಂದದಲ್ಲಿ ಮುಳುಗಿ ಹೋಯಿತು. ಸೀತೆಯು ಪತಿಸಮೇತವಾಗಿ ವ್ರತಾಚರಣೆಯಲ್ಲಿ ತೊಡಗಬೇಕೆಂದು ಗುರುವಾಜ್ಞೆಯಾಯಿತು.

ಪಟ್ಟಾಭಿಷೇಕಕ್ಕೆ ನಡೆಯುತ್ತಿದ್ದ ಸಕಲ ಸಿದ್ಧತೆಗಳನ್ನು ಕಂಡ ಮಂಥರೆಯ ದುರ್ಬೋಧನೆಯಿಂದ ಕೈಕೆಯ ಪರವಶಳಾಗಿ ದಶರಥನಲ್ಲಿ ರಾಮನು ಕಾಡಿಗೆ ಹೋಗುವಂತೆ,

ತನ್ನ ಮಗನಿಗೆ ಪಟ್ಟ ಕಟ್ಟುವಂತೆ ವರ ಬೇಡಿದಳು. ಕೊನೆಗೆ ಸೀತಾಪತಿಯು ತಾನು ಹದಿನಾಲ್ಕು ವರ್ಷಗಳ ಕಾಲ ಹೋಗುವುದಾಗಿಯೂ ತಮ್ಮನಾದ ಭರತನಿಗೆ ಯುವರಾಜ ಪಟ್ಟಾಭಿಷೇಕವನ್ನು ಮಾಡಿಸಬೇಕೆಂದು ಮಾತಾಪಿತೃವಾಕ್ಯವನ್ನು ಪರಿಪಾಲಿಸುವುದು ತನ್ನ ಆದ್ಯ ಕರ್ತವ್ಯವೆಂದು ಹೇಳಿ ವನವಾಸಕ್ಕೆ ಸಿದ್ಧನಾದನು.

**ವನವಾಸವ್ರತಧಾರಿಣಿಯಾದ ವೈದೇಹಿ**

ಶ್ರೀರಾಮ ತಾನು ವನವಾಸಕ್ಕೆ ಹೊರಡುತ್ತಿರುವ ವಿಷಯವನ್ನು ತಾಯಿ ಕೌಸಲ್ಯೆಗೆ ತಿಳಿಸಿ ಬಹುಸಮಕಟಕ್ಕೀಡು ಮಾಡಿ ಅವಳ ಪ್ರಾರ್ಥನೆ ಸಾಧುವಲ್ಲವೆಂದು ಬೋಧಿಸಿ ಒಪ್ಪಿಸಿ ಸೀತೆಯ ಅಂತಃಪುರವನ್ನು ಪ್ರವೇಶಿಸಿದನು. ತನ್ನ ಗಂಡನ ಪಟ್ಟಾಭಿಷೇಕದ ವೈಭವದ ದೃಶ್ಯವನ್ನು ತನ್ನ ಚಿತ್ತರಂಗದಲ್ಲಿ ಚಿತ್ತಾರವನ್ನು ಸೃಷ್ಟಿಸುತ್ತಿದ್ದ ಸೀತೆ ಪತಿಯ ದೃಢವಾದ ಮ್ಲಾನವದನವನ್ನು ಅಭಿಷೇಕಕ್ಕೆ ಪೂರ್ವಭಾವಿಯಾಗಿ ಧರಿಸಬೇಕಾದ ಉಡುಪು ಮತ್ತು ಮರ್ಯಾದೆಗಳನ್ನು ಬಿಟ್ಟು ಬಂದದ್ದನ್ನು ವೀಕ್ಷಿಸಿ ಸೀತೆಗೆ ಅನಿರ್ವಚನೀಯವಾದ ಕಂಬನಿಗಳು ಉದುರಿದವು. ತನ್ನ ವನವಾಸದ ವೃತ್ತಾಂತವನ್ನು ತಿಳಿಸಿದನು. ಪತಿಯ ಬಾಯಿಂದ ವನವಾಸ ವೃತ್ತಾಂತವನ್ನು ತಿಳಿದು ಜ್ಯೋತಿಷಿಗಳು ಅರುಹಿದ್ದ ವನವಾಸವು ಈ ರೀತಿಯಲ್ಲಿ ಘಟಿಸಿದೆ ಎಂದು ಆಲೋಚಿಸಿ ತಾನೂ ಅರಣ್ಯ ವಾಸಕ್ಕೆ ಹೋಗುವ ದೃಢವ್ರತವನ್ನು ಕೈಗೊಂಡಳು.

'ನಾನು ಹದಿನಾಲ್ಕು ವರ್ಷ ವನವಾಸಕ್ಕೆ ಹೋಗುವೆನು. ಭರತನು ಯುವರಾಜನಾಗಿರುತ್ತಾನೆ. ನಿರ್ಜನವಾದ ವನಕ್ಕೆ ಹೋಗುವ ಮುನ್ನ ನಿನ್ನನ್ನು ನೋಡಿ ಹೋಗಲು ಬಂದಿದ್ದೇನೆ. ಭರತನ ಸಮೀಪದಲ್ಲಿ ನನ್ನನ್ನು ಎಂದಿಗೂ ಹೊಗಳಕೂಡದು, ಐಶ್ವರ್ಯದಿಂದ ಕೂಡಿದ ಪುರುಷರು ಪರರ ಸ್ತೋತ್ರವನ್ನು ಸಹಿಸುವುದಿಲ್ಲ. ಆದ್ದರಿಂದ ಭರತನ ಎದುರಿಗೆ ನನ್ನ ಗುಣಗಳನ್ನು ಸ್ತೋತ್ರ ಮಾಡದಿರು. ನೀನು ಅರಮನೆಯಲ್ಲಿ ವಿಶೇಷ ಸುಖಗಳನ್ನಪೇಕ್ಷಿಸದೆ ಅವನಿಗೆ ವಿರೋಧ ಕಾಣದಂತೆ ನಡೆದುಕೊಳ್ಳಬೇಕು. ನಾನು ಅರಣ್ಯಕ್ಕೆ ತೆರಳಿದ ಬಳಿಕ ವ್ರತೋಪವಾಸಗಳಲ್ಲಿ ಆಸಕ್ತಳಾಗಿ ಹೊತ್ತು ಹೊತ್ತಿಗೆ ಯಥಾವಿಧಿಯಾಗಿ ದೇವರ ಪೂಜೆಗಳನ್ನು ಮಾಡುತ್ತಾ ನಮ್ಮ ತಂದೆ ದಶರಥನಿಗೂ, ನನ್ನ ತಾಯಿ ಕೌಸಲ್ಯಾದೇವಿಗೂ ಗೌರವ ತೋರಿಸುತ್ತ ಇರಬೇಕು. ನನ್ನ ಇತರ ಮಾತೆಯರನ್ನೂ ಸಹ ನಿತ್ಯವೂ ವಂದಿಸತಕ್ಕದ್ದು. ನನ್ನ ಪ್ರಾಣಕ್ಕಿಂತಲೂ ಪ್ರಿಯರಾದ ಭರತ ಶತ್ರುಘ್ನರನ್ನು ಒಡಹುಟ್ಟಿದವರಂತೆ, ಪುತ್ರರಂತೆ ಕಾಣಬೇಕು. ಭರತನಿಗೆ ಅಪ್ರಿಯವಾದ ಕಾರ್ಯವನ್ನು ಎಂದಿಗೂ ಎಸಗಬಾರದು. ಆತನು ದೇಶಕ್ಕು ನಮ್ಮ ವಂಶಕ್ಕೂ ಪ್ರಭುವಾಗಿ ನಾನು ಅರಣ್ಯಕ್ಕೆ ಹೋಗಿ ಬರುತ್ತೇನೆ' ಎಂದು ತನ್ನ ಸಹಧರ್ಮಿಣಿಗೆ ತಿಳಿಸಿದನು.

ರಾಮನ ಈ ಮಾತುಗಳನ್ನು ಕೇಳಿ ವೈದೇಹಿ ವಿಶ್ವಾಸದಿಂದಲೇ ಹುಸಿಕೋಪವನ್ನು ತಾಳುತ್ತಾ ಪತಿಗೆ ಈ ರೀತಿ ನುಡಿದಳು. 'ವೀರನಾದ ನರಶ್ರೇಷ್ಠನೇ, ನಿನ್ನ ನಿಶ್ಚಯವೆಂದು ಇಷ್ಟು ಹಗುರವಾಗಿ ನೀನು ಹೇಳುವ ಈ ಮಾತನ್ನು ಕೇಳಿ ನನಗೆ ನಗೆ ಬರುತ್ತಿದೆ. ತಂದೆ, ತಾಯಿ, ಸಹೋದರ, ಮಗ, ಸೊಸೆ ಇವರೆಲ್ಲರೂ ತಮ್ಮ ತಮ್ಮ ಪುಣ್ಯಫಲಗಳನ್ನು ಅನುಭವಿಸುತ್ತ ತಮ್ಮ ತಮ್ಮ ಭಾಗ್ಯವನ್ನು ಪಡೆಯುವರು. ಆದರೆ ಪತ್ನಿಯೊಬ್ಬಳೇ ಪತಿಯ ಭಾಗ್ಯವನ್ನು ಪಡೆಯುವಳು. ಆದ್ದರಿಂದ ನಾನು ಅರಣ್ಯದಲ್ಲಿ ವಾಸಿಸತಕ್ಕುದೆಂದು ಆಜ್ಞಾಪಿಸಲ್ಪಟ್ಟಂತೆಯೇ ಸರಿ.

ಸ್ತ್ರೀಯರಿಗೆ ಈ ಲೋಕದಲ್ಲೂ ಪರದಲ್ಲೂ ಪತಿಯೊಬ್ಬನೇ ಯಾವಾಗಲೂ ಗತಿಯಾಗಿರುವನು. ತಂದೆಯೂ ಅಲ್ಲ, ಮಗನೂ ಅಲ್ಲ, ತಾನೂ ಅಲ್ಲ, ತಾಯಿಯೂ ಅಲ್ಲ, ಸಖೀಜನರೂ ಅಲ್ಲ. ಆದ ಕಾರಣ ನಿನ್ನನ್ನು ವನಕ್ಕೆ ಹೋಗೆಂದು ಹೇಳಿದವರು ನನಗೂ ಅದನ್ನು ಹೇಳಿದಂತೆಯೇ ನೀನು ವನಕ್ಕೆ ಹೋಗುವುದಾದರೆ ನಾನು ನಿನ್ನ ಮುಂದೆ ನಡೆಯತಕ್ಕವಳು; ದಾರಿಯ ಕುಶಕಂಟಕಗಳನ್ನು ತೆಗೆದು ಹಾಕುವವಳು. ನನ್ನಿಂದ ನಿನಗೆ ಯಾವ ತೊಂದರೆಯೂ ಇಲ್ಲ. ನನ್ನನ್ನು ಧೈರ್ಯದಿಂದ ಕರೆದುಕೊಂಡು ಹೋಗು ಮೂರುಲೋಕಗಳನ್ನು ಲೆಕ್ಕಿಸದೆ ಪಾತಿವ್ರತ್ಯವೊಂದನ್ನೇ ಗಮನಿಸುತ್ತ ತಂದೆಯ ಮನೆಯಲ್ಲಿ ಹೇಗೋ ಹಾಗೆ ಅರಣ್ಯದಲ್ಲಿ ಸುಖವಾಗಿರುವೆನು' ಎಂದು ಕೇಳುತ್ತಾಳೆ.

ಅರಮನೆಯ ಪರಿಸರವನ್ನು ಆಳವಾಗಿ ಅಧ್ಯಯನ ಮಾಡಿದ್ದ ಸೀತೆ ಮುಂದೆ ಒದಗಬಹುದಾದ ಅನಿರೀಕ್ಷಿತಗಳ ಬಗ್ಗೆ ಆಕೆಗೆ ಅರಿವಿತ್ತು. ಪತಿಯೊಡನೆ ತಾನು ಅರಣ್ಯ ವಾಸಕ್ಕೆ ವಾಸವನ್ನು ಕೈಗೊಳ್ಳುವುದಕ್ಕೆ ಆಕೆಗಿದ್ದ ಪತಿಪ್ರೇಮ ಒಂದು ಕಡೆಯಾದರೆ ರಾಮನನ್ನು ತೊರೆದು ಮಲಮಕ್ಕಳ ಆಳ್ವಿಕೆಯಲ್ಲಿರುವ ಅರಮನೆಯಲ್ಲಿ ಏಕಾಂಗಿಯಾಗಿ ಬಾಳುವುದು ಸಾಧ್ಯವೇ? ಹೆತ್ತಮಗನನ್ನೇ ಕಾಡಿಗೆ ಕಳುಹಿಸಲು ಸಂಚು ಮಾಡಿದ ಕೈಕೇಯಿ ಇನ್ನೂ ಹೊರಗಿಂದ ಬಂದವಳನ್ನು ಅರಮನೆಯಲ್ಲಿ ಬಾಳಲು ಅವಕಾಶ ಮಾಡಿಕೊಡುವಳೆ ಎಂಬ ಅನುಮಾನ, ಭಯ ಅವಳನ್ನು ಆವರಿಸಿ ಗಂಡನೊಡನೆ ಕಾಡಿಗೆ ತೆರಳುವಂತೆ ಪ್ರಚೋದಿಸಿರಬಹುದು. ಆಗಿಂದಾಗೆ ಅರಮನೆಯಲ್ಲಿ ಕಲಹಗಳು ಸಂಭವಿಸುತ್ತಿದ್ದವು. 'ತಂದೆಯ ಮನೆಯಲ್ಲಿ ಹೇಗೋ ಹಾಗೆ ಅರಣ್ಯದಲ್ಲಿ ನಿನ್ನೊಡನೇ ಸುಖವಾಗಿರುವೆನು' ಎಂಬ ಸೀತೆಯ ಮಾತು ಇದನ್ನೇ ಧ್ವನಿಸುತ್ತದೆ.

'ನಿನ್ನ ಸಂಗಡ ಅರಣ್ಯಕ್ಕೆ ಈಗಲೇ ಬರುವೆನು. ಇದರಲ್ಲಿ ಸಂಶಯವಿಲ್ಲ. ಪ್ರತಿನಿತ್ಯವೂ ನಿನಗೆ ಸೇವೆ ಮಾಡುತ್ತ ನಿಯತಳಾಗಿ ಬ್ರಹ್ಮಚಾರಿಣಿಯಾಗಿ, ನಿನ್ನ ಜೊತೆ ನಿರ್ಭಯಳಾಗಿ ಎಲ್ಲೆಡೆಗಳಲ್ಲಿಯೂ ನದಿಗಳನ್ನು ಗಿರಿಗಳನ್ನು ಸರೋವರಗಳನ್ನು ವನಗಳನ್ನು ನೋಡಲಿಚ್ಛಿಸುವೆನು. ವೀರನಾದ ನಿನ್ನ ಸಂಗಡ ಸುಖದಿಂದಿದ್ದು ಹಂಸಗಳಿಂದಲೂ ನೀರು ಕೊಳಗಳಿಂದಲೂ ತುಂಬಿ ಚೆನ್ನಾಗಿ ಪುಷ್ಪಿತವಾದ ಪದ್ಮಗಳಿಂದ ಕೂಡಿದ ಸರೋವರಗಳನ್ನು ನೋಡಬಯಸುವೆನು. ಅವುಗಳಲ್ಲಿ ನಿತ್ಯವು ನಿಯಮವ್ರತಗಳಿಂದ ಕೂಡಿ ಸ್ನಾನ ಮಾಡುವೆನು. ಪರಮ ಸಂತೋಷದಿಂದ ನಿನ್ನ ಸಂಗಡ ವಿಹರಿಸುವೆನು. ಈ ಪ್ರಕಾರ ನಿನ್ನೊಡನೆ ನೂರು ವರ್ಷವಾಗಲಿ ಸಾವಿರ ವರ್ಷವಾಗಲಿ ಕಳೆದು ಹೋಗುವುದನ್ನು ತಿಳಿಯಲಾರೆನು. ಇದನ್ನುಳಿದು ಸ್ವರ್ಗವೂ ಸಹ ನನಗೆ ಸಮ್ಮತವಲ್ಲ. ನಿನ್ನನ್ನು ಬಿಟ್ಟು ನನಗೆ ಸ್ವರ್ಗದಲ್ಲಿ ವಾಸವು ಲಭಿಸಿದರೂ ಅದು ಸಹ ನನಗೆ ರುಚಿಸಲಾರದು. ನಿನ್ನ ಹೊರತು ಬೇರೊಬ್ಬರನ್ನು ಚಿಂತಿಸದೆ ನಿನ್ನಲ್ಲೆ ಅನುರಾಗವನ್ನು ಹೃದಯದಲ್ಲಿಟ್ಟವವಳಾಗಿ ನೀನು ಬಿಟ್ಟು ಬಿಟ್ಟರೆ ಮರಣ ಹೊಂದಲು ನಿಶ್ಚಯಿಸಿರುವವಳಾಗಿರುವ ನನ್ನನ್ನು ಕರೆದುಕೊಂಡು ಹೋಗು' ಎಂದು ದೀನಳಾಗಿ ಕೇಳಿದಳು.

ಸುಂದರ ವನದ ಕಲ್ಪನೆಯಲ್ಲಿದ್ದ ಸೀತೆಗೆ ಅಲ್ಲಿನ ಘೋರತನವನ್ನು ಪರಿಚಯ ಮಾಡಿ ತನ್ನೊಡನೆ ಬಂದರೆ ಕಾಡಿಗೆ ತೊಂದರೆಗಳ್ನನು ಅನುಭವಿಸಬೇಕಾಗುತ್ತದೆ ಎಂದು

ನಿರಾಕರಿಸುತ್ತಾನೆ. 'ದೇವಿ, ನೀನು ಉತ್ತಮ ಕುಲದ ಸ್ತ್ರೀ, ಸದಾ ಧರ್ಮದಲ್ಲಿ ನಿರತಳು, ನೀನು ಇಲ್ಲಿದ್ದು ಧರ್ಮವನ್ನು ನಡೆಸು, ವನದಲ್ಲಿ ತೊಂದರೆಗಳು ಬಹಳ, ನನ್ನ ಮಾತನ್ನು ಕೇಳು, ಕಾಂತಾರ ನಿನದಗಳು ಭಯಂಕರವಾದವು. ವನದ ಮಹಾಮೃಗಗಳು ನೋಡಲು ಭೀಕರವಾದವು. ನದಿಗಳು ಬದಿ, ನೀರಿನಲ್ಲಿ ಮೊಸಳೆಗಳು, ದಾರಿಗಳಲ್ಲಿ ಮುಳ್ಳು ಬಳ್ಳಿಗಳು, ಮರದಿಂದ ಬಿದ್ದ ಹಣ್ಣನ್ನು ತಿನ್ನಬೇಕು. ಅದು ಸಿಕ್ಕದಿದ್ದರೆ ಉಪವಾಸ ಮಾಡಬೇಕು. ಜಟೆಯನ್ನು ಬೆಳೆಸಬೇಕು. ವಲ್ಕಲವನ್ನು ಧರಿಸಬೇಕು. ಅಲ್ಲಿ ಬಹು ರೀತಿಯ ಬಹುರೂಪದ ಹಾವುಗಳು ಹರಿಯುತ್ತಿರುತ್ತವೆ. ಪತಂಗಗಳು, ವೃಶ್ಚಿಕಗಳು, ಕೀಟಗಳು, ದಂಶಗಳು, ಮಶಕಗಳು ನಿತ್ಯವೂ ಬಾಧಿಸುವವು. ನೀನು ವನಕ್ಕೆ ಬರುವ ಮಾತನ್ನು ಬಿಡು' ಎಂದ ರಾಮನಿಗೆ ತನ್ನ ನಿರ್ಧಾರವನ್ನು ಸಮರ್ಥಿಸುತ್ತಾ ಸೀತೆ 'ನೀನು ಯಾವುದನ್ನು ವನವಾಸದ ತೊಂದರೆಗಳೆಂದು ಹೇಳುವೆಯೋ ಅವೇ ನನಗೆ ನಿನ್ನ ಸಲುವಾಗಿ ಗುಣಗಳೆಂದು ತಿಳಿ. ಹುಲಿ, ಸಿಂಹಗಳು ನಮಗೆ ತೊಂದರೆ ಮಾಡಲಾರವು ಜನರನ್ನು ಎಂದೂ ನೋಡದ ಕಾರಣ ಅವು ನಿನ್ನನ್ನು ಕಂಡು ದೂರ ಹೋಗುವವು. ನಾನು ನಿನ್ನ ಆಶ್ರಯದಲ್ಲಿ ಇರಬೇಕಾದರೆ ಸುರೇಶ್ವರನಾದ ಶಕ್ರನು ನನ್ನ ಗೋಜಿಗೆ ಬರುವುದು ಸಾಧ್ಯವಿಲ್ಲ. ನಾನು ತಂದೆಯ ಮನೆಯಲ್ಲಿರುವಾಗ ನಾನು ನಿಶ್ಚಯವಾಗಿಯೂ ಅರಣ್ಯದಲ್ಲಿರಬೇಕಾಗುತ್ತದೆಂದು ಬ್ರಾಹ್ಮಣರು, ಭವಿಷ್ಯ ಹೇಳಿರುವರು. ಅಂದಿನಿಂದ ವನವಾಸ ಮಾಡಬೇಕೆಂದು ನನ್ನ ಅಪೇಕ್ಷೆ. ಬ್ರಾಹ್ಮಣರ ಆ ಮಾತು ನಿಜವಾಯಿತು. ನೀನು ಕಾಡಿಗೆ ಕರೆದುಕೊಂಡು ಹೋಗಲು ನೀನು ಒಪ್ಪದಿದ್ದರೆ ನಾನು ಮರಣ ಹೊಂದುವುದಕ್ಕಾಗಿ ವಿಷವನ್ನೋ ನೀರನ್ನೋ ಆಶ್ರಯಿಸುವೆನು' ಎನ್ನುತ್ತಾಳೆ. ಸೀತೆ ಬಹುವಿಧವಾಗಿ ರಾಮನನ್ನು ಬೇಡಿದರೂ ಅವಳನ್ನು ತನ್ನೊಡನೆ ಕರೆದುಕೊಂಡು ಹೋಗಲು ನಿರಾಕರಿಸುತ್ತಾನೆ. ತಾನೂ ಎಷ್ಟು ಬೇಡಿದರೂ ಕರೆದುಕೊಂಡು ಹೋಗದ ರಾಮನನ್ನು ಕುರಿತು ಕಟುವಾಗಿ ಟೀಕಿಸುತ್ತಾಳೆ.

ಕಿಂ ತ್ವಾಮನ್ಯತ ವೈದೇಹ: ಪಿತಾ ಮೇ ಮಿಥಿಲಾದಿಪಃ
ರಾಮಜಾಮಾತಂ ಪ್ರಾಪ್ಯಸ್ತ್ರೀಯಂ ಪುರುಷವಿಗ್ರಹಂ
ಅನೃತಂ ಬತ ಲೋಕೋಽಯಮಜ್ಞಾನಾದ್ಯಧಿಪಕ್ಶ್ಯತಿ
ತೇಜೋ ನಾಸ್ತಿಪಂರಾಮೇ ತಪತೀವ ದಿವಾಕರೇ[೧]

'ರಾಮನೆ ಮಿಥಿಲಾಧಿಪನಾದ ತಂದೆ ಜನಕನು ಪುರುಷಾಕಾರದ ಸ್ತ್ರೀಯಾದ ನಿನ್ನನ್ನು ಅಳಿಯನನ್ನಾಗಿ ಹೇಗೆ ತಿಳಿದನು'

ರಾಮನಿಗೆ ಮೀರಿದ ಪರಾಕ್ರಮ ಶಾಲಿಯಲ್ಲನೆಂದು ಜನರು ಹೇಳುತ್ತಾರೆ. ಇದು ಅನೃತ ಇರಬೇಕಲ್ಲವೆ? ಏನು ಮಾಡಿದ ಕಾರಣದಿಂದ ನೀನು ವಿಷಣ್ಣನಾಗಿದ್ದಿಯೇ ನಿನಗೆ ಯಾವುದರಿಂದ ಭಯವಾಗುತ್ತಿದೆ. ನೀನು ಯಾವ ಕಾರಣದಿಂದ ನನ್ನನ್ನು ಬಿಡಲಪೇಕ್ಷಿಸುತ್ತಿಯೇ ಇನ್ನೂ ಚಿಕ್ಕ ವಯಸ್ಸಿನ ಹೆಂಡತಿಯನ್ನು ಇತರರ ಅಧೀನಕ್ಕೆ ಒಪ್ಪಿಸಲಿಚ್ಛಿಸುತ್ತಿರುವೆ, ನಿನ್ನಂಥವರು ಇನ್ನೊಬ್ಬರಿರಬಹುದೆಂದು ನನ್ನ ಮನಸ್ಸಿಗೂ ತೋರುವುದಿಲ್ಲ. ನಿನ್ನೊಡನೆ ಇದ್ದಲ್ಲಿ ನನಗೆ ದಾರಿಯ ಮುಳ್ಳು ಕಲ್ಲು ಹತ್ತಿಯಂತೆ ತೊಗಲಿನಂತೆ ಮೆದುವಾಗಿ ಕಾಣುತ್ತದೆ. ಗಾಳಿಯಿಂದ

---

[೧] ಅಯೋಧ್ಯಾಕಾಂಡ ಸರ್ಗ ೨೦

ಎದ್ದು ಮೇಲೆ ಬೀಳುವ ಧೂಳನ್ನು ನಾನು ಅತ್ಯುತ್ತಮವಾದ ಚಂದನವೆಂದು ಭಾವಿಸುತ್ತೇನೆ. ಅರಣ್ಯದಲ್ಲಿ ಹುಲ್ಲಿನ ಮೇಲೆ ದರ್ಭೆಯ ಚಾಪೆಯನ್ನು ಹಾಸಿ ಮಲಗುವುದಿದೆಯಲ್ಲ ಅದಕ್ಕಿಂತ ಹೆಚ್ಚಿನ ಸುಖಯಾವುದಿದೆ? ಹಣ್ಣು ಹಂಪಲು ನಾರು ಬೇರು ಯಾವುದನ್ನು ನೀನು ಕೊಂಚವೂ ಹೆಚ್ಚಾಗಿಯೇ ತಂದುಕೊಡುತ್ತೀಯೋ ಅದು ನನಗೆ ಅಮೃತರಸೋಪಮ ನನ್ನಿಂದ ನಿನಗೆ ತೊಂದರೆಯಾಗುವುದಿಲ್ಲ. ನಾನು ನಿನಗೆ ಬಹು ಭಾರವಾಗುವುದಿಲ್ಲ. ನನ್ನನ್ನು ಇಲ್ಲಿ ಬಿಡಬೇಡ ಕರೆದುಕೊಂಡು ಹೋಗು. ಹಾಗೆ ಕರೆದುಕೊಂಡು ಹೋಗದೆ ಇದ್ದರೆ ನಾನು ವಿಷವನ್ನು ತೆಗೆದುಕೊಳ್ಳುತೇನೆ. ನಿನ್ನನ್ನು ಅಗಲಿದ ಶೋಕವನ್ನು ನಾನು ಒಂದು ಮುಹೂರ್ತವಾದರೂ ತಡೆಯಲಾರೆನು; ಅಂಥದರಲ್ಲಿ ಹತ್ತು ವರುಷ, ಮತ್ತೆ ಮೂರು ವರ್ಷ, ಮತ್ತೆ ಒಂದು ವರುಷ ಹೇಗೆ ಸಹಿಸಲಿ ಎಂದು ಬಹುಶೋಕ ಸಂತಪ್ತಳಾಗಿ ಬಹು ದೈನ್ಯದಿಂದ ರೋಧಿಸುತ್ತ ಆಯಾಸಗೊಂಡವಳಾಗಿ ಪತಿಯನ್ನು ಗಾಢವಾಗಿ ಆಲಂಗಿಸಿ ಗಟ್ಟಿಯಾಗಿ ಅತ್ತುಬಿಟ್ಟಳು. ಹೀಗೆ ಅಳುತ್ತಿದ್ದ ಪತ್ನಿಯನ್ನು ಸಮಾಧಾನಪಡಿಸಿ ರಾಮನು ಅವಳಿಗೆ 'ದೇವಿ ನೀನು ದುಃಖಪಡುತ್ತಿರುವಾಗ ನನಗೆ ಸ್ವರ್ಗವಾಸವೂ ರುಚಿಸುವುದಿಲ್ಲ. ನನಗೆ ಎಲ್ಲಿಯಾಗಲಿ ಯಾವುದಾಗಲಿ ಭಯಕೂಡ ಇಲ್ಲ. ನಿನ್ನನ್ನು ನೋಡಿಕೊಳ್ಳಲು ಶಕ್ತನಾದರೂ ನಿನ್ನ ಅಭಿಪ್ರಾಯ ಹೇಗೆಂದು ತಿಳಿಯದೆ ನೀನು ಅರಣ್ಯಕ್ಕೆ ಬರುವುದನ್ನು ನಾನು ಅಪೇಕ್ಷಿಸಲಾಗಲಿಲ್ಲ. ನೀನು ನನ್ನೊಂದಿಗೆ ವನವಾಸ ಮಾಡಲು ಹುಟ್ಟಿದೆಯೆ ಎಂದು ಕಾಣುತ್ತದೆ. ಧೀರನಿಗೆ ಕೀರ್ತಿ ಹೇಗೋ ಹಾಗೆ ನನಗೆ ನೀನು ಬಿಡಲಾಗದ ವಸ್ತು. ಅಗತ್ಯವಾಗಿ ಜೊತೆಗೆ ಬಾ ಸಹಧರ್ಮಚಾರಿಯಾಗು. ಈ ನಿನ್ನ ಯೋಚನೆ ನನ್ನ ನಿನ್ನ ಕುಲಗಳಿಗೆ ಅನುಗುಣವಾದದ್ದು ಕಾಡಿಗೆ ಹೊರಡಲು ತಕ್ಕ ಏರ್ಪಾಡನ್ನು ಮಾಡು ಬ್ರಾಹ್ಮಣರಿಗೆ ಭಿಕ್ಷುಕರಿಗೆ ಭೃತ್ಯರಿಗೆ ಒಡವೆ ವಸ್ತುಗಳನ್ನು ದಾನಮಾಡು' ಎಂದನು. ಪತಿಯ ಈ ಮಾತನ್ನು ಕೇಳಿ ಸಂತೋಷದಿಂದ ತನ್ನ ಒಡವೆ ವಸ್ತುಗಳನ್ನು ಎಲ್ಲರಿಗೂ ಹಂಚಿ ವನವಾಸಕ್ಕೆ ಸಿದ್ಧಳಾದಳು.

ಊರ್ಮಿಳೇಶನು ತಾನೂ ವನವಾಸಕ್ಕೆ ಬರುವುದಾಗಿ ಹಠಹಿಡಿದನು. ಸೀತಾ ರಕ್ಷಣೆಗೊಬ್ಬ ಬೇಕೆಂದು ರಾಮನು ಅನುಮತಿ ಕೊಟ್ಟನು. ಪತ್ನಿಯ ಹೊಯ್ ಕೈಯಾಗಿ ರಾಘವನ್ನು ದಾನಧರ್ಮಗಳನ್ನು ಮಾಡಿದನು. ರಾಮನು ಸೀತಾ ಲಕ್ಷ್ಮಣರೊಡನೆ ದಶರಥನನ್ನು ನೋಡಲು ಬಂದನು. ಮಹಾರಾಜನು ಸೀತಾರಾಮರಿಗೆ ವನವಾಸಾವಧಿಯಲ್ಲಿ ಬೇಕಾದ ಸಾಮಗ್ರಿಗಳನ್ನು ಕೊಡಲು ಆಜ್ಞೆ ಮಾಡಿದನು. ಕೈಕೇಯಿ ಬಹುನಿಷ್ಠುರವಾಗಿ ಭರತನನ್ನು ಪಾಳು ರಾಜ್ಯಕ್ಕೆ ಪಟ್ಟಾಬಿಷೇಕ್ತನನ್ನಾಗಿ ಮಾಡಬೇಕೆಂದು ನಿನ್ನ ಅಭಿಷ್ಟವೆ? ಎಂದಳು. ಅಲ್ಲಿ ಅಯೋಧ್ಯೆಗೆ ಅಯೋಧ್ಯೆಯೇ ಸೇರಿತ್ತು. ಅಂತಃಪುರ ಸ್ತ್ರೀಯರೆಲ್ಲಾ ಶೋಕತಪ್ತರಾಗಿ ಸೀತೆ ಹೋಗಬಾರದೆಂದು ದುಃಖಿಸಿದರು. ಕೈಕೇಯಿ ನಾರು ಬಟ್ಟೆಗಳನ್ನು ಮೂವರಿಗೂ ತಂದುಕೊಟ್ಟಳು. ಆ ನಾರು ಬಟ್ಟೆಯನ್ನು ನೋಡಿ ಹೆಣ್ಣು ಜಿಂಕೆಯ ಬಲೆಯನ್ನು ಕಂಡು ಬೆದರುವಂತೆ ಭಯಗೊಂಡಳು. ಕೈಕೇಯಿ ತಂದುಕೊಟ್ಟ ವಲ್ಕಲಗಳನ್ನು ರಾಮಲಕ್ಷ್ಮಣರು ಧರಿಸಿದರು. ಸೀತಾದೇವಿ ನಾರು ಮಡಿಯನ್ನು ಉಡಲು ತಿಳಿಯದೆ ತನ್ನ ಪತಿಯನ್ನು ನೋಡಿದಳು ಕಡೆಗೆ ಸೀತಾಪತಿಯೇ ಆಕೆಗೆ ನಾರುಮಡಿಯನ್ನು ಉಡಿಸಿದನು. ಸೀತಾದೇವಿ ನಾರುಮಡಿಯನ್ನು ಧರಿಸುತ್ತಿದ್ದುದ್ದನ್ನು ಕಂಡ ಅಲ್ಲಿ ಸೇರಿದವರೆಲ್ಲ ಆಕೆ ವನಕ್ಕೆ ಹೋಗಬೇಕೆಂದು ನಿಯುಕ್ತಳಾಗಿಲ್ಲ ರಾಮ ಬರುವವರೆಗೆ

ಇವಳನ್ನಾದರೂ ನೋಡುತ್ತಿರುತ್ತೇವೆ ಇವಳನ್ನು ಬಿಟ್ಟುಹೋಗು ಲಕ್ಷ್ಮಣನು ನಿನ್ನೊಡನೆ ಅರಣ್ಯಕ್ಕೆ ಬರಲಿ ಎಂದು ಹೇಳಿದಾಗ ಆಂತರಿಕವಾಗಿ ತಿರಸ್ಕರಿಸಿ ನುಡಿಯದೇ ನಡೆದು ವ್ಯಕ್ತಪಡಿಸಿ ಆ ಪ್ರಲೋಭನವನ್ನೂ ಗೆದ್ದಿದ್ದಳು. ಸುಮಂತ್ರನು ರಥವನ್ನು ಸಿದ್ಧಪಡಿಸಿದನು. ಸೀತೆ ಅತ್ತೆಯ ಆಶೀರ್ವಾದವನ್ನು ಪಡೆದಳು. ಮಹಾರಾಜನ ಆಜ್ಞೆಯಂತೆ ಹದಿನಾಲ್ಕು ವರ್ಷಗಳಿಗೆ ಸಾಕಾಗುವಷ್ಟು ಉಡುಗೆ ತೊಡುಗೆಗಳು ಸೀತೆಗೆ ಬಂದವು. ಅತ್ತೆ ಸೊಸೆಗೆ ಬುದ್ಧಿ ಮಾತುಗಳನ್ನು ಹೇಳಿದಳೇ ವಿನಃ ಮಗನ ಜೊತೆ ವನವಾಸ ಮಾಡುವ ಅಗತ್ಯವಿಲ್ಲ ಎನ್ನುವುದಿಲ್ಲ. ಕೌಸಲ್ಯೆಯ ಪುತ್ರ ವಾತ್ಸಲ್ಯದ ಅರಿವು ಸೀತೆಗಿತ್ತು. ಪತಿಯನ್ನು ಹಿಂಬಾಲಿಸಿ ಆ ಮಾತೃಸ್ಥಾನದ ಹೊಣೆಯನ್ನು ಹೊರಬೇಕೆಂಬ ಅತ್ತೆಯ ಆಶೀರ್ವಾದವನ್ನು ಪಡೆದಳು.

ಮೂವರು ವನ ಪ್ರಯಾಣವನ್ನು ಬೆಳೆಸಿದರು. ಸುವರ್ಣಭೂಷಿತವಾದ ರಥವನ್ನು ಸುಮಂತ್ರನು ತಂದು ನಿಲ್ಲಿಸಿದನು. ಸರ್ವಾಲಂಕಾರ ಭೂಷಿತಳಾದ ಸೀತಾದೇವಿ ಉತ್ಸಾಹದಿಂದಲೇ ಮೊದಲು ರಥವನ್ನೇರಿದಳು. ಬಳಿಕ ರಾಮಲಕ್ಷ್ಮಣರು ಹಾರೆ ಬುಟ್ಟಿ ಸಮೇತ ಹತ್ತಿದರು. ಮುಂದಿನ ಎಲ್ಲ ಮಹತ್ವದ ಕಾರ್ಯಗಳಿಗೆ ಸೀತೆ ಮುಂಚೂಣಿಯಲ್ಲಿರುವಳು ಎಂಬುದನ್ನು ಧ್ವನಿಸುವಂತೆ ಸೀತೆ ತಾನೇ ಮೊದಲು ರಥವನ್ನೇರಿದಳು. ಅಯೋಧ್ಯಾ ನಗರವೇ ಸೀತಾದಿಗ್ವಿಜಯದ ನಾಟಕರಂಗವಾಗಿ ಪರಿಣಮಿಸಿತು. ಅದರಲ್ಲಿ ಕೌಸಲ್ಯಾ ದಶರಥರೇ ಮುಖ್ಯ ಪಾತ್ರಗಳು ಬಾಣಂತಿಯರಾದಿಯಾಗಿ ಪುರಜನರೇ ಹಿಮ್ಮೇಳವಾದರು. ಶ್ರೀರಾಮಲಕ್ಷ್ಮಣ ಸುಮಂತ್ರರೇ ಮುಮ್ಮೇಳದವರು. ಪಂಚಭೂತಗಳೇ ಪ್ರೇಕ್ಷಕರು. ಸೀತೆಗಿದು ಮಹಾ ಪ್ರಲೋಭನವಾಗಿ ಅದರಲ್ಲೂ ದುಃಖದಿಂದ ಓಲಾಡಿ ತೂರಾಡಿ ಹಿಂಬಾಲಿಸುತ್ತಿದ್ದ ಅತ್ತೆಯ ಚಿತ್ರಣ ಆಕೆಯನ್ನು ಬಾಧಿಸತೊಡಗಿತು. ಶ್ರೀರಾಮನನ್ನು ಭೂಮಿಜೆ ನೆರಳಿನಂತೆ ಹಿಂಬಾಲಿಸಿದಳು.

ಪುರಜನರು ಪ್ರವಾಹದಂತೆ ಹರಿದು ಬರುತ್ತಲೇ ಇದ್ದರು. ಇದನ್ನು ತಡೆಗಟ್ಟುವ ವಿಧಾನ ಹೇಗೆಂಬುದು ಸತಿಪತಿಯರ ಚಿಂತೆಗೆ ಕಾರಣವಾಯಿತು. ಪತಿಯ ಪರಾಕ್ರಮದ ಪರಿಚಯವಿದ್ದರೂ ಇಲ್ಲಿ ಪ್ರದರ್ಶನಕ್ಕೆಡೆಯಿಲ್ಲ. ವೀರತ್ವದಿಂದಲೇ ಪ್ರತಿಯೊಂದನ್ನು ಸಾಧಿಸುವುದು ಸಾಧ್ಯವಿಲ್ಲ. ಈ ಪ್ರಜಾನುರಾಗ ಬಂಧನದಿಂದ ಶ್ರೀರಾಮನು ಯುಕ್ತಿಯಿಂದ ಪಾರಾಗುವ ತಂತ್ರವನ್ನು ಪರೀಕ್ಷೆ ಮಾಡುವ ಮನೋಭಾವದಲ್ಲಿದ್ದಳು. ಶ್ರೀರಾಮನು ದಾರಿಯನ್ನು ಒಂದು ದಿಕ್ಕಿಗೆ ಸಮೆಸಿ ಹಿಂದಿರುಗಿ ಮತ್ತೊಂದು ದಿಕ್ಕಿನಲ್ಲಿ ಮುಂದೆ ಸಾಗಿದ. ಇದು ಸೀತಾದೇವಿಗೆ ಒಪ್ಪಿಗೆಯಾಯಿತು. ಸಾರಥಿಯಾದ ಸುಮಂತ್ರನು ರಥದಲ್ಲಿ ರಾಮಲಕ್ಷ್ಮಣ ಸೀತಾದೇವಿಯನ್ನು ಗಂಗಾ ತೀರದವರೆಗೂ ಬಿಟ್ಟು ಬಹು ದುಃಖದಿಂದ ಅಯೋಧ್ಯೆಗೆ ಹಿಂತಿರುಗಿದನು. ಗಂಗಾ ನದಿಯನ್ನು ದಾಟಲು ಗುಹನು ನಾವೆಯನ್ನು ಸಿದ್ಧಗೊಳಿಸಿದನು. ಸೀತೆ ಭಕ್ತಿಯಿಂದ ಭಾಗೀರಥಿಗೆ ನಮಸ್ಕರಿಸಿ ಹರಕೆ ಮಾಡಿಕೊಂಡಳು 'ತಾವು ಕ್ಷೇಮವಾಗಿ ಹಿಂತಿರುಗಿ ಬಂದು ರಾಜ್ಯವನ್ನು ಪಡೆದ ಮೇಲೆ ನಿನಗೆ ಸಂತೋಷವನ್ನುಂಟು ಮಾಡುವುದಕ್ಕಾಗಿ ಬ್ರಾಹ್ಮಣರಿಗೆ ಒಂದು ಲಕ್ಷ ಗೋವುಗಳನ್ನು ವಸ್ತ್ರಗಳನ್ನೂ ಮೃಷ್ಟಾನ್ನವನ್ನೂ ಕೊಡುವೆನು. ಒಂದು ಸಾವಿರ ಮಧ್ಯಕುಂಭಗಳಿಂದಲೂ ಮಾಂಸಮಿಶ್ರವಾದ ಅನ್ನದಿಂದಲೂ ಪರಿಶುದ್ಧಳಾಗಿ ನಿನ್ನನ್ನು ಪೂಜಿಸುವೆನು[೧] ಎಂದು ಭಕ್ತಿಯಿಂದ

[೧] ಅಯೋಧ್ಯಾಕಾಂಡ ಸರ್ಗ ೫೨.

ನಮಿಸುತ್ತಾಳೆ ಪತಿಗೆ ಹಿತಾಕಾಂಕ್ಷಿಣಿಯಾದ ಆ ಸಾಧ್ವಿಯು ಈ ರೀತಿಯಲ್ಲಿ ಗಂಗಾನದಿಯನ್ನು ಪ್ರಾರ್ಥಿಸುತ್ತಿರುವಾಗಲೇ ನಾವೆಯು ನದಿಯ ದಕ್ಷಿಣ ತೀರವನ್ನು ತಲುಪಿತು. ಯಮುನಾ ನದಿಯನ್ನು ದಾಟುವಾಗ 'ದೇವಿ ನಿನಗೆ ಒಳಿತಾಗಲಿ, ನಿನ್ನನ್ನು ದಾಟುತ್ತಿರುವೆನು, ನನ್ನ ಪತಿಯು ತನ್ನ ವ್ರತವನ್ನು ಪೂರೈಸಲಿ ಇಕ್ಷ್ವಾಕು ರಾಜರಿಂದ ಪಾಲಿಸಲ್ಪಟ್ಟ ಅಯೋಧ್ಯಾ ಪಟ್ಟಣಕ್ಕೆ ರಾಮನು ಕ್ಷೇಮವಾಗಿ ಹಿಂತಿರುಗಿ ಬಂದರೆ ನಿನ್ನನ್ನು ಒಂದು ಸಾವಿರ ಗೋವುಗಳಿಂದಲೂ ಒಂದು ನೂರು ಮಧ್ಯದ ಘಟಗಳಿಂದಲೂ ಪೂಜಿಸುವೆನು'[೧] ಎಂದು ಕೈಮುಗಿದು ಬೇಡಿಕೊಂಡಳು.

ಅರಣ್ಯವನ್ನು ಪ್ರವೇಶಿಸಿದಾಗ ಅಲ್ಲಿಯ ಕಷ್ಟ ಜೀವನವನ್ನೂ ನಿರ್ಜನತೆಯನ್ನೂ ಕಂಡು ತನ್ನ ವಿಧಿಯನ್ನಾಗಲಿ, ಇಂತಹ ಗಂಡನನ್ನು ಏಕೆ ಕೈ ಹಿಡಿದೆನೆಂದಾಗಲಿ ಎಂದೂ ಒಂದು ಬಾರಿಯೂ ಸೀತೆ ಆಲೋಚಿಸುವುದಿಲ್ಲ. ಯಾರನ್ನು ಶಪಿಸುವುದಿಲ್ಲ. ಅರಮನೆಯ ಸುಖಭೋಗಗಳನ್ನು ಮರೆತು ರಾಮನೊಡನೆ ಅರಣ್ಯದ ಸೌಂದರ್ಯವನ್ನು ಕಣ್ತುಂಬ ತುಂಬಿಕೊಳ್ಳುತ್ತಾ ಪತಿಯೊಡನೆ ಸಂತೋಷವಾಗಿದ್ದಳು. ಅಯೋಧ್ಯಯನ್ನಗಲಿದ ದಿನದಿಂದ ಗುಹಕೊಟ್ಟ ಅತಿಥ್ಯವನ್ನು ನಿರಾಕರಿಸಿ ಗಂಗಾ ನದಿಯನ್ನು ದಾಟಿ ವತ್ಸದೇಶದ ಸಮೀಪಕ್ಕೆ ಬಂದರು. ಶ್ರೀರಾಮ ಸೀತೆಯನ್ನು ವನವಾಸಕ್ಕೆ ಹಂತಹಂತವಾಗಿ ಸಿದ್ಧಗೊಳಿಸಿ ಆಕೆಯನ್ನು ಉಪವಾಸಕ್ಕೀಡು ಮಾಡಿ ಪರೀಕ್ಷೆ ಮಾಡಿದ್ದಾಯಿತು. ಜಾನಕಿ ಗೆದ್ದಳು, ಮರದ ಕೆಳಗೆ ನೆಲದ ಮೇಲೆ ಮಲಗುವಳೋ ಇಲ್ಲವೋ ಎಂದು ಪರೀಕ್ಷೆಯನ್ನು ಮಾಡಿದನು ಅದರಲ್ಲೂ ಭೂಜಾತೆ ಗೆದ್ದಳು.

**ಚಿತ್ರಕೂಟದಲ್ಲಿ ಮೊದಲ ವಾಸ್ತವ್ಯ**

ರಾಮ ಲಕ್ಷ್ಮಣ ಜಾನಕಿ ಸಮೇತನಾಗಿ ಭರದ್ವಾಜ ಮನಿಗಳ ಆಶ್ರಮವನ್ನು ಪ್ರವೇಶಿಸಿದನು. ಭಾರದ್ವಾಜ ಮಹರ್ಷಿಗೋವನ್ನು, ಅರ್ಘ್ಯೋದಕವನ್ನೂ ರಸಾನ್ನಗಳನ್ನು ತರಿಸಿ ಉಪಚರಿಸಿದರು. ವೈದೇಹಿಯು ಸುಖವಾಗಿ ವಿಹರಿಸಲು ತಕ್ಕುದಾದ ಏಕಾಂತ ಪ್ರದೇಶದಲ್ಲಿ ಆಶ್ರಮಕ್ಕೆ ಒಳ್ಳೆಯ ಸ್ಥಾನವನ್ನು ನೋಡಿರಿ' ಎಂದು ಕೇಳಿದ ರಾಮನಿಗೆ ಭಾರದ್ವಾಜರು ಚಿತ್ರಕೂಟ ಪರ್ವತವು ನಿಮಗೆ ಯೋಗ್ಯವಾದ ಸ್ಥಳವೆಂದು ತಿಳಿಸಿದರು. ಚಿತ್ರಕೂಟಕ್ಕೆ ಹೋಗುವ ದಾರಿಯನ್ನು ತಿಳಿಸಿದರು. 'ಯಮುನೆಯ ದಕ್ಷಿಣ ದಂಡೆಯನ್ನು ತಲುಪಿ ಮುಂದೆ ಹೋದರೆ ಅಲ್ಲಿ ನಿಮಗೆ ಹಸುರೆಲೆಗಳಿಂದ ದಟ್ಟವಾದ ಒಂದು ದೊಡ್ಡ ಆಲದ ಮರವು ಕಾಣುತ್ತದೆ. ಅದು ಅನೇಕ ವೃಕ್ಷಗಳಿಂದ ಪರಿವೃತವಾಗಿ ಕಪ್ಪಗೆ ತೋರುತ್ತದೆ. ಅದು ಸಿದ್ಧ ಪುರುಷರಿಂದ ಸೇವಿತವಾದ ವೃಕ್ಷ ಸೀತೆಯು ಆ ವೃಕ್ಷಕ್ಕೆ ಕೈ ಮುಗಿದು ನಿಮ್ಮೆಲ್ಲರಿಗೂ ಒಳ್ಳೆಯದಾಗಲೆಂದು ಪ್ರಾರ್ಥನೆಯನ್ನು ಸಲ್ಲಿಸಲಿ'[೨] ಎಂದರು. ಪತ್ನಿ ಪತಿಯ ಏಳಿಗೆಗಾಗಿ ಪ್ರಾರ್ಥಿಸಬೇಕು, ಆ ಫಲಪ್ರಾಪ್ತಿ ಸೀತೆಯ ಪ್ರಾರ್ಥನೆಯಿಂದಲೇ ಸಾಧ್ಯ. ಆ ವಟವೃಕ್ಷಕ್ಕೆ ಸೀತೆ ನಮಿಸಿದಳು. ಪ್ರದಕ್ಷಿಣೆ ಮಾಡಿ ನನ್ನ ಪತಿಯು ತನ್ನ ವ್ರತವನ್ನು ಪೂರ್ಣಗೊಳಿಸಲಿ ನಾನು ಕೌಸಲ್ಯೆಯನ್ನೂ ಕೀರ್ತಿವಂತಳಾದ ಸುಮಿತ್ರೆಯನ್ನು ನೋಡುವಂತಾಗಲಿ ಎಂದು ಬೇಡಿಕೊಂಡಳು.

---

[೧] ಅದೇ, ಸರ್ಗ ೫೫.

[೨] ಅಯೋಧ್ಯಾಕಾಂಡ, ಸರ್ಗ ೫೫.

ಚಿತ್ರಕೂಟವನ್ನು ಪ್ರವೇಶಿಸಿ ವಾಲ್ಮೀಕಿ ಆಶ್ರಮವನ್ನು ಸೇರಿದರು. ಶ್ರೀರಾಮನು ತನ್ನ ವನವಾಸ ವೃತ್ತಾಂತವನ್ನೆಲ್ಲಾ ತಿಳಿಸಿದನು. ಅನಂತರ ಯೋಗ್ಯವಾದ ಸ್ಥಳದಲ್ಲಿ ಒಂದು ಪರ್ಣಶಾಲೆಯನ್ನು ನಿರ್ಮಿಸಿ ಶಾಸ್ತ್ರೋಕ್ತವಾಗಿ ಒಂದು ಜಿಂಕೆಯನ್ನು ಬಲಿಕೊಟ್ಟು ಮಂತ್ರಪೂರ್ವಕ ವಾಸ್ತು ಪೂಜೆ ಮಾಡಿ ವನಗೃಹವನ್ನು ಹೊಕ್ಕರು. ಅಯೋಧ್ಯೆಯನ್ನು ಅಗಲಿದ ದುಃಖವೆಲ್ಲ ಮಾಯವಾಯಿತು. ಸೀತೆಗೆ ಚಿತ್ರಕೂಟ ಪರ್ವತವನ್ನು ತೋರಿಸುತ್ತ ವಸಂತನ ವೈಭವವನ್ನು ವರ್ಣಿಸುತ್ತ ಶ್ರೀರಾಮನು ಸೀತೆಯ ಮನಸ್ಸಿಗೆ ಸಂತೋಷವನ್ನು ಉಂಟು ಮಾಡುತ್ತಿದ್ದನು. ಜಿತೇಂದ್ರಿಯಳಾದ ಜಾನಕಿಗೆ ರಾಮನು ವಸಂತ ವರ್ಣನೆಯನ್ನು ಮಾಡಿ ಪ್ರಲೋಭನವನ್ನು ಒಡ್ಡಿದರೂ ಅದನ್ನು ಮೀರಿ ನಡೆದಳು.

ನಿರ್ಜನವಾದ ಕ್ರೂರ ಪ್ರಾಣಿಗಳಿಂದ ಕೂಡಿದ ವನದಲ್ಲಿಯೂ ಜಾನಕಿ ಮನೆಯಲ್ಲಿರುವಂತೆ ಯಾವ ಭಯವಿಲ್ಲದೆ ಸುಖವಾಗಿರುತ್ತಿದ್ದಳು. ವೈದೇಹಿಯು ನಗರದ ಉಪವನದಲ್ಲಿ ವಿಹರಿಸಿದ್ದಂತೆ ವಿನೋದದಿಂದಿರುವಳು. ಸೀತೆಯ ಚಿತ್ತವು ಪೂರ್ತಿಯಾಗಿ ರಾಮನ ವಶವಾಗಿದೆ. ಆಕೆಯ ಹೃದಯವು ರಾಮನಲ್ಲಿಯೇ ನೆಲೆಯಾಗಿದೆ. ಆಕೆಯ ಪ್ರಾಣವು ಆತನ ಅಧೀನವಾಗಿದೆ. ರಾಮನಿಲ್ಲದಿದ್ದರೆ ಅವಳಿಗೆ ಅಯೋಧ್ಯೆಯು ಸಹ ಕಾಡಿನಂತಾಗುವುದು. ನಿರ್ಜನ ಪ್ರದೇಶದಲ್ಲಿಯು ಆಕೆ ಬಾಲಕಿಯಂತೆ ವಿಹರಿಸುವಳು. ಜಾನಕಿ ದಾರಿಯಲ್ಲಿ ಸಿಗುವ ಗ್ರಾಮ, ನಗರ ವಿಚಾರಗಳನ್ನು ನದಿಗಳು ಹರಿಯುತ್ತಿರುವುದನ್ನು ನೋಡಿ ಅವುಗಳ ವಿಚಾರವನ್ನು ವಿಧವಿಧವಾಗಿ ಮರಗಳ ವಿಚಾರವನ್ನು ರಾಮನನ್ನೊ ಲಕ್ಷ್ಮಣನನ್ನೊ ಕೇಳಿ ತಿಳಿದುಕೊಳ್ಳುತ್ತಾಳೆ. ಕಾಡು ದಾರಿಯಲ್ಲಿ ನಡೆದರೂ ಬಿರುಗಾಳಿ ಬೀಸಿದರೂ ಭಯದ ಸಂದರ್ಭ ಒದಗಿದರೂ ಬಿಸಲು ಕಾದರೂ ಸೀತೆ ಜಗ್ಗುವುದಿಲ್ಲ. ಮುಖವು ಬಾಡುವುದಿಲ್ಲ. ಯಾವಾಗಲೂ ಮಧುರವಾಗಿ ಮಾತನಾಡುತ್ತಿರುವಳು. ಅವಳ ಕಾಲಂದಿಗೆಗಳು ಕುಲುಕುಲು ದನಿಗೆ ಅನುಗುಣವಾಗಿ ಹೆಜ್ಜೆಯಿಡುತ್ತ ವಿಲಾಸದಿಂದ ನಡೆದು ಹೋಗುತ್ತಾಳೆ. ಪತಿಯ ಮೇಲಿನ ಪ್ರೇಮದಿಂದ ಸಕಲ ಒಡವೆಗಳನ್ನು ಧರಿಸಿದ್ದಾಳೆ. ಅವಳು ಕಾಡಿನಲ್ಲಿ ಆನೆ, ಸಿಂಹ, ಹುಲಿಗಳನ್ನು ಕಂಡರೂ ಅಂಜುವುದಿಲ್ಲ. ಶ್ರೀರಾಮನ ಭುಜಗಳನ್ನು ಆಶ್ರಯಿಸಿದ ಸೀತೆಗೆ ಭೀತಿಯೇ ಇಲ್ಲ. ವನದಲ್ಲಿ ಕಷ್ಟವನ್ನೆಣಿಸದೆ ಸಂತುಷ್ಟ ಚಿತ್ತಳಾಗಿದ್ದಳು. ಫಲಮೂಲಾದಿಗಳನ್ನು ಸೇವಿಸುತ್ತ ಮಹರ್ಷಿಗಳು ತುಳಿದ ಮಾರ್ಗದಲ್ಲಿ ದೃಢನಿಷ್ಠೆಯಿಂದ ನಡೆಯುತ್ತಿದ್ದಳು ಎಂಬ ಸುಮಂತ್ರನ ಅಭಿಪ್ರಾಯ ದಿಟವಾದುದು.

ಮದುವೆಯಾಗದೆಯೇ ಬ್ರಹ್ಮಚರ್ಯೆಯನ್ನು ಆಚರಿಸುವುದು ಒಂದು ಬಗೆಯಾದರೆ ಮದುವೆಯಾಗಿಯು ಸಾಂಸಾರಿಕ ಜೀವನದಲ್ಲಿ ಇದ್ದುಕೊಂಡು ಬ್ರಹ್ಮಚರ್ಯೆಯನ್ನು ಅನುಸರಿಸುವುದು ಇನ್ನೊಂದು ಬಗೆಯಾಗಿರುತ್ತದೆ. ಸೀತಾರಾಮರು ವನವಾಸದಲ್ಲಿ ಬ್ರಹ್ಮಚರ್ಯೆ ವ್ರತವನ್ನು ಒಂದು ತಪಸ್ಸಾಗಿ ಆಚರಿಸಿದರು. ಪರಸ್ಪರ ಅತಿಯಾದ ಪ್ರೇಮವುಳ್ಳವರಾಗಿದ್ದರೂ ಬ್ರಹ್ಮಚರ್ಯೆವ್ರತವನ್ನು ಆಚರಿಸಿದ್ದು ಅವರ ಚಾರಿತ್ರ್ಯವನ್ನು ಮತ್ತು ಉಜ್ವಲಗೊಳಿಸಿತು. ಸೀತೆಯನ್ನು ಸಂತೋಷಗೊಳಿಸಲು ಚಿತ್ರಕೂಟವನ್ನು ವರ್ಣಿಸುವ ನೆಪದಲ್ಲಿ ಬ್ರಹ್ಮಚಾರಿಣಿಯನ್ನು ಮತ್ತಷ್ಟೂ ಗಟ್ಟಿಗೊಳಿಸಿದನು. 'ಮನೋಹರವಾದ ವೃಕ್ಷಗಳಿಂದ ತುಂಬಿ ಈ ಗಿರಿಯ ಕಾಂತಿಯು ಅಭಿವೃದ್ಧಿ ಹೊಂದುತ್ತಿದೆ. ಮನೋಹರವಾದ ಬೆಟ್ಟದ ತಪ್ಪಲುಗಳಲ್ಲಿ ಆನಂದಭರಿತರಾಗಿ ಸ್ವೇಚ್ಛೆಯಾಗಿ

ಜತೆಜತೆಯಾಗಿ ವಿಹರಿಸುತ್ತಿರುವ ಈ ಕಿನ್ನರರನ್ನು ನೋಡು. ಕೊಂಬೆಗಳಿಗೆ ಕತ್ತಿಗಳನ್ನು ಉತ್ತಮವಾದ ವಸ್ತ್ರಗಳನ್ನು ತಗಲುಹಾಕಿರುವ ವಿದ್ಯಾಧರ ಸ್ತ್ರೀಯರ ಮನೋಹರವಾದ ವಿಹಾರ ಸ್ಥಾನಗಳನ್ನೂ ನೋಡು ಜಲಪಾತಗಳಿಂದಲೂ ನೆಲವನ್ನು ಕೊರೆದುಕೊಂಡು ಮೇಲಕ್ಕೆ ಬಂದು ಸ್ವಲ್ಪ ಸ್ವಲ್ಪ ಹರಿಯುತ್ತಿರುವ ನದಿಗಳಿಂದಲೂ ಈ ಬೆಟ್ಟವು ಮದವನ್ನು ಸುರಿಸುತ್ತಿರುವ ಆನೆಯಂತೆ ಕಂಗೊಳಿಸುತ್ತಿದೆ. ಬಗೆ ಬಗೆಯ ಪುಷ್ಪಗಳ ಗಂಧವನ್ನು ಹೊತ್ತು ಗುಹೆಯಿಂದ ಹೊರಟುಬರುವ ವಾಯುವು ಯಾವ ಮನುಷ್ಯನ ಘ್ರಾಣೇಂದ್ರಿಯಗಳನ್ನು ತಾನೆ ತೃಪ್ತಿಗೊಳಿಸಿ ಸಂತೋಷಪಡಿಸಲಾರದು?[೧] ಎನ್ನುತ್ತಾನೆ. ಇನ್ನೂ ಮುಂದುವರೆದು 'ಚಿತ್ರಕೂಟದ ಈ ಶಿಖರವು ಎಲ್ಲೆಡೆಯಲ್ಲಿಯೂ ಶುಭಕರವಾಗಿ ಕಾಣುತ್ತಿದೆ. ಕಮಲದ ದಳಗಳಿಂದ ಕೂಡಿದ ಕಾಮುಕರ ಹಾಸಿಗೆಗಳಂತಿರುವ ಉತ್ಪಲ, ಪುನ್ನಾಗ, ಸ್ಥಗರ, ಭೂಜಪತ್ರ ಎಂಬ ವೃಕ್ಷದ ಎಲೆಗಳಿಂದ ಮಾಡಿದ ಮೇಲುಹೊದಿಕೆಗಳನ್ನು ನೋಡು, ಕಾಮುಕರು ಭೋಗಿಸಿ ಬಿಸುಟಿರುವ ಕಮಲದ ಹಾರಗಳೂ ಬಗೆಬಗೆಯ ಫಲಗಳೂ ಕಾಣುತ್ತಿವೆ. ಈ ವನವಾಸ ಕಾಲವನ್ನು ನಿನ್ನೊಡನೆಯೂ ಲಕ್ಷ್ಮಣನೊಡನೆಯೂ ವಿಹರಿಸಿ ಶ್ರೇಷ್ಠವಾದ ನನ್ನ ವ್ರತಗಳಿಂದ ಸತ್ಪುರುಷರ ಮಾರ್ಗದಲ್ಲಿ ಇದ್ದುಕೊಂಡ, ಕುಲಧರ್ಮವರ್ಧಕವಾದ ಆನಂದವನ್ನು ಪಡೆಯುವೆನು'[೨] ಎನ್ನುತ್ತಾನೆ.

ಮಂಗಳಕರವಾದ ಮಂದಾಕಿನೀ ನದಿಯನ್ನು ಜಾನಕಿಗೆ ತೋರಿಸುತ್ತಾ 'ಈ ಚಿತ್ರಕೂಟವನ್ನು, ಈ ಮಂದಾಕಿನಿಯನ್ನು ನೋಡುತ್ತಿರುವುದು ಅಯೋಧ್ಯೆಯಲ್ಲಿರುವುದಕ್ಕಿಂತ ನನಗೆ ಆನಂದವಾಗಿದೆ. ನೀನು ಪ್ರತ್ಯಕ್ಷವಾಗಿ ನನ್ನ ಬಳಿಯಿರುವುದರಿಂದ ಆನಂದ ಇಮ್ಮಡಿಸಿದೆ. ತಪಸ್ಸು, ಶಮ, ದಮಗಳಿಂದ ಕೂಡಿ ಪಾಪವನ್ನು ನೀಗಿಕೊಂಡಿರುವ ಸಿದ್ಧರು ದಿನವೂ ಉಪಯೋಗಿಸುತ್ತಿರುವ ಈ ನೀರಿನಲ್ಲಿ ನನ್ನೊಡನೆ ಸ್ನಾನಮಾಡು, ಎಲೆ, ಸೀತೆ, ಕಮಲಪುಷ್ಪಗಳನ್ನೂ ಬಿಳಿದಾವರೆಗಳನ್ನು ನೀರಿನಲ್ಲಿ ಮುಳುಗಿಸುತ್ತ ನನ್ನ ಸಖಿಯಂತೆ ಮಂದಾಕಿನಿ ನದಿಯಲ್ಲಿ ನನ್ನೊಡನೆ ಸ್ನಾನಮಾಡು. ತ್ರಿಕಾಲಗಳಲ್ಲಿ ಇಲ್ಲಿ ಸ್ನಾನ ಮಾಡುತ್ತ ಜೇನು, ಗೆಡ್ಡೆ ಗೆಣಸು, ಹಣ್ಣು ಹಂಪಲಗಳನ್ನು ತಿಂದುಕೊಂಡು ನಿನ್ನ ಜೊತೆಯಲ್ಲಿದ್ದರೆ ನನಗೆ ಅಯೋಧ್ಯೆಯೂ ಬೇಡ, ರಾಜಪದವಿಯೂ ಬೇಡ'[೩] ಹೀಗೆ ದಂಪತಿಗಳು ವಿಹರಿಸುತ್ತಾ ಕಾಲಕಳೆಯುತ್ತಿದ್ದರು. ಪತ್ನಿ ಸಖಿಯಂತೆ ಜಲಕ್ರೀಡೆಯಾಡುವುದು ಜಿತೇಂದ್ರಿಯರಿಗೆ ಮಾತ್ರ ಸಾಧ್ಯವಲ್ಲವೆ? ಪತ್ನಿಯ ಬ್ರಹ್ಮಚರ್ಯೆಯನ್ನು ಪರೀಕ್ಷೆ ಮಾಡಿದನು. ಪರಸ್ಪರ ಇಂದ್ರಿಯ ನಿಗ್ರಹದ ತುಲನೆಯಾಗಿ ಇಬ್ಬರು ವಿಜಯಿ ಸಾಧಿಸಿದರು. ಉಟೋಪಚಾರದ ಮೂಲಕ ಹೆಂಡತಿಯನ್ನು ತೃಪ್ತಿಗೊಳಿಸಿದನು. ಸೀತೆಗೆ ಮಾಂಸದೂಟವನ್ನು ಬಡಿಸಿ 'ಇದು ಬಹಳ ಶುದ್ಧವಾದುದು, ಇದು ರುಚಿಯಾದುದು, ಇದನ್ನು ಬೆಂಕಿಯಲ್ಲಿ ಚೆನ್ನಾಗಿ ಸುಟ್ಟಿದೆ' ಎಂದು ಹೇಳುತ್ತಾ ಅವಳನ್ನು ಉಪಚರಿಸುತ್ತಿದ್ದನು. ಸಂಸಾರದ ತುಂಬು ಪ್ರೀತಿಯನ್ನು ಅನುಭವಿಸುತ್ತಾ ಬಹುನಿಷ್ಠೆಯಿಂದ ವನವಾಸವ್ರತವನ್ನು ಆಚರಿಸಿದರು.

---

[೧] ಅಯೋಧ್ಯಾಕಾಂಡ, ಸರ್ಗ ೯೪.

[೨] ಅದೇ

[೩] ಅದೇ ಸರ್ಗ ೯೫.

ಇತ್ತ ತಂದೆಯ ಮರಣವನ್ನು, ಅಣ್ಣನ ವನವಾಸವನ್ನು ಕೇಳಿ ನೊಂದ ಭರತ ಅಣ್ಣನನ್ನು ತಾಯಿ ಸಮಾನಳಾದ ಅತ್ತಿಗೆಯನ್ನು ಅಯೋಧ್ಯೆಗೆ ಕರೆತರುವುದಾಗಿ ಚಿತ್ರಕೂಟಕ್ಕೆ ಬಂದನು. ಭರತನ ಸೇನೆ ಹರಿದು ಬರುತ್ತಿರುವುದನ್ನು ನೋಡಿ ಲಕ್ಷ್ಮಣ ನಮ್ಮನ್ನು ನಾಶಗೊಳಿಸಲು ಬರುತ್ತಿರುವರು ಯುದ್ಧಕ್ಕೆ ಸಿದ್ಧನಾಗು ಎಂದು ರಾಮನಿಗೆ ಹೇಳಿದನು. ಭರತನು ಪ್ರೇಮವನ್ನು ತಿಳಿದಿದ್ದ ರಾಮ, ಲಕ್ಷ್ಮಣನನ್ನು ಸಮಾಧಾನಗೊಳಿಸಿದನು. ರಾಮ ಎಣಿಸಿದಂತೆ ಭರತ ಕಣ್ಣೀರು ಸುರಿಸುತ್ತಾ ಅಣ್ಣನ ಪಾದಗಳಿಗೆ ನಮಸ್ಕರಿಸಿದನು. ಅವನನೆತ್ತಿ ಸಮಾಧಾನಗೊಳಿಸಿದನು. ತಂದೆಯ ಮರಣ ವಾರ್ತೆಯನ್ನು ಕೇಳಿ ಅತೀಯಾದ ದುಃಖವನ್ನು ಅನುಭವಿಸಿದನು. ಮಾವನನ್ನು ಕಳೆದುಕೊಂಡು ದುಃಖಿಸುತ್ತಿದ್ದ ವೈದೇಹಿಯನ್ನು ಸಮಾಧಾನಗೊಳಿಸಿದನು. ಸೀತಾ ಲಕ್ಷ್ಮಣ ಸಮೇತನಾಗಿ ಮಂದಾಕಿನಿ ತೀರ್ಥಗಳಿಂದ ಪಿತೃತರ್ಪಣವನ್ನು ಪಿಂಡ ಪ್ರಧಾನ ಮಾಡಿದನು. ಮತ್ತೆ ರಾಜ್ಯಕ್ಕೆ ಹಿಂತಿರುಗಿ ರಾಜ್ಯವನ್ನು ವಹಿಸಿಕೊಳ್ಳುವಂತೆ ಭರತ ಎಷ್ಟು ಬೇಡಿ ಕಣ್ಣೀರು ಕರೆದರು ರಾಮ ಒಪ್ಪಲಿಲ್ಲ. ಕಡೆಗೆ ಮಹಾತ್ಮ ಭರತ ಮತ್ತು ಶ್ರೀರಾಮ ಇಬ್ಬರು ವಿಜಯಿಗಳಾದರು. ಭರತ ಪಾದುಕೆಗಳನ್ನು ಸ್ವೀಕರಿಸಿ ಶಿರದೊಳಾಂತು ಅಯೋಧ್ಯಾಭಿ ಮುಖವಾದನು. ಇದನ್ನೆಲ್ಲವನ್ನು ನೋಡುತ್ತಾ ಸೀತೆ ಮೌನ ಕಂಬನಿ ಸುರಿಸುತ್ತಿದ್ದಳು. ಅತ್ತೆಯ ಪಾದಗಳಿಗೆ ನಮಸ್ಕರಿಸಿ ಆಶೀರ್ವಾದ ಪಡೆದಾಗ ಅವರ ಕಣ್ಣೀರು ಜಾನಕಿಯ ಬೆನ್ನಮೇಲೂ ವೈದೇಹಿಯ ಕಂಬನಿ ಅವರ ಪಾದಗಳ ಮೇಲೂ ಬಿದ್ದವು. ರಾಮನೇ ಪರೋಕ್ಷವಾಗಿ ಅಯೋಧ್ಯಾಪತಿಯಾಗಿರುವುದರಲ್ಲಿ ಪೂರ್ಣವಿಶ್ವಾಸವನ್ನು ತಳೆದು ಭರತನನ್ನು ಅಂತರ್ಯದಲ್ಲೇ ವಂದಿಸಿ ಹರಸಿದಳು.

**ಸಾಧ್ವಿ ಸೀತೆಗೆ ಮಹಾಸಾಧ್ವಿ ಅನಸೂಯಳ ಹಿತೋಪದೇಶ**

ಚಿತ್ರಕೂಟದಲ್ಲಿ ನಡೆದ ಭ್ರಾತೃವಾತ್ಸಲ್ಯದ ಬೃಹದ್ಘಟನೆಯು ಪದೇ ಪದೆ ರಾಮನಿಗೆ ತಾಯಿ, ಸಹೋದರ, ಪ್ರೀತಿ ಪಾತ್ರರು ತನಗಾಗಿ ರೋಧಿಸುತ್ತಿದ್ದ ದೃಶ್ಯವೇ ನೆನಪಿಗೆ ಬರುತ್ತಿತ್ತು. ಅದರಿಂದಾಗಿ ಚಿತ್ರಕೂಟವನ್ನು ತೊರೆದು ಬೇರೆಡೆಗೆ ಹೋಗಲು ತೀರ್ಮಾನಿಸಿದರು. ಸೀತಾ ಸಮೇತನಾಗಿ ರಾಮಲಕ್ಷ್ಮಣರು ಅತ್ರಿಋಷಿಯ ಆಶ್ರಮಕ್ಕೆ ಬಂದರು. ಅತ್ರಿ ಆಶ್ರಮದಲ್ಲಿ ಆ ಮಹಾಮುನಿಯ ದರ್ಶನವನ್ನು ಪಡೆದು ಅವರ ಆತಿಥ್ಯದ ಮಹಿಮೆಯನ್ನು ತಿಳಿದರು. ಮಹರ್ಷಿಯ ಇಚ್ಛೆಯಂತೆ ಜಾನಕಿಯು ವೃದ್ಧಪತಿವ್ರತೆಗೆ ತಾನು ಸೀತೆ ಎಂದು ಭಕ್ತಿಪೂರ್ವಕವಾಗಿ ಪರಿಚಯ ಮಾಡಿಕೊಂಡಳು. ವೈದೇಹಿಯನ್ನು ಮಗಳೇ ಎಂದು ಕರೆದು ತನ್ನ ಬಳಿ ಕುಳ್ಳಿರಿಸಿಕೊಂಡ ಪಾತಿವ್ರತ್ಯದ ಮಹತ್ವವನ್ನು ಪತಿಭಕ್ತಿಯ ಹಿರಿಮೆಯನ್ನು ತಿಳಿಸಿದಳು. ಒಳ್ಳೆಯವನಾಗಲಿ, ಕೆಟ್ಟವನಾಗಲಿ ಪತ್ನಿಗೆ ಪತಿಯೇ ಪರದೈವವೆಂದು ಸರ್ವಸ್ವವನ್ನು ತ್ಯಾಗ ಮಾಡಿ ಪತಿಯನ್ನು ಹಿಂಬಾಲಿಸಿ ಪಾತಿವ್ರತ್ಯವನ್ನು ಮೆರೆಸಿದ್ದೀಯೆ. ಆದರೆ ಲೋಕದಲ್ಲಿ ದುಷ್ಟ ಸ್ತ್ರೀಯರು ಕಾಮವೊಂದನ್ನೇ ಗುರಿಯಿಟ್ಟುಕೊಂಡು ಅಪಕೀರ್ತಿಯನ್ನು ಗಳಿಸುವರೆಂದೂ ಲೋಕದ ನಿಚೋಚ್ಛ ಭಾವಗಳನ್ನು ಬಲ್ಲ ನಿನ್ನಂತಹವರು ಸಹಧರ್ಮಚಾರಿಣಿಯರಾಗಿ ಕೀರ್ತಿಗೂ ಪುಣ್ಯಕ್ಕೂ ಭಾಗಿಯಾಗುವರೆಂದು ಹೇಳಿ ಹರ್ಷಗೊಳಿಸಿದಳು. ಗುಣ ಗ್ರಾಹಿಯಾದ ಜಾನಕಿಯು ತನ್ನ ಪತಿ ಸದ್ಗುಣ ಸಂಪನ್ನನೂ ದಯಾಳುವೂ ಜಿತೇಂದ್ರಿಯನೂ ಆಗಿದ್ದಾನೆ. ಆ ಧರ್ಮಾತ್ಮನು ನನ್ನಲ್ಲಿ ಸ್ಥಿರವಾಗಿ ಪ್ರೇಮವನ್ನಿಟ್ಟಿದ್ದಾನೆ. ಅರಮನೆಯ ಸ್ತ್ರೀಯರನ್ನು ಕೌಸಲ್ಯೆ ಎಂದೇ ಭಾವಿಸಿದ್ದಾನೆ

ಎಂದಳು. ಅನಸೂಯೆ ಸೀತೆಯ ಮಾತಿನಿಂದ ತೃಪ್ತಳಾಗಿ ಯಾವ ವರವನ್ನಾದರೂ ಕೇಳು ಎಂದಳು. ಅದನ್ನು ಕೇಳಿ ಸೀತೆಯು ಬೆರಗಾಗಿ ಮುಗುಳ್ನಗೆಯಿಂದ ನಿನ್ನ ಅನುಗ್ರಹದಿಂದ ನನಗೆ ಯಾವುದಕ್ಕೂ ಕೊರತೆಯಿಲ್ಲವೆಂದಳು. ಅನುಸೂಯೆ ಮತ್ತಷ್ಟು ಹರ್ಷಿತಳಾಗಿ 'ಸೀತೆ, ನಿನಗೆ ಪ್ರಯೋಜನಕರವಾಗುವಂತೆಯೂ ಸಂತೋಷವುಂಟಾಗುವಂತೆಯೂ ನಾನು ಮಾಡುವೆನು. ಎಲೈ ಸೀತೆ, ದೇವತಾಸಂಬಂಧವುಳ್ಳುದೂ ಶ್ರೇಷ್ಠವೂ ಆದ ಈ ಹಾರವನ್ನೊ ವಸ್ತ್ರಾಭರಣಗಳನ್ನೂ ಬೆಲೆ ಬಾಳತಕ್ಕ ಅಂಗಲೇಪನ ದ್ರವ್ಯಗಳನ್ನು ನಿನಗೆ ನಾನು ಕೊಡುವೆನು. ನಿನ್ನ ಅವಯವಗಳನ್ನು ಇವು ಅಲಂಕರಿಸಲಿ, ಇವು ಬಾಡಿ ಹೋಗದೆ ಶಾಶ್ವತವಾಗಿರುವುವು. ಎಲೆ ಜನಕಾತ್ಮಜೆ, ದಿವ್ಯವಾದ ಈ ಅಂಗರಾಗಗಳನ್ನು ಲೇಪಿಸಿಕೊಂಡ ಅವಯವಗಳುಳ್ಳ ನೀನು ಮಹಾಲಕ್ಷ್ಮಿಯು ವಿಷ್ಣುವಿನ ಕಾಂತಿಯನ್ನೀಯುವಂತೆ ಪತಿಗೆ ಕಾಂತಿಯನ್ನು ಕೊಡುವೆ' ಎಂದಳು. ಅನುಸೂಯೆಯು ಪ್ರೀತಿಯಿಂದ ಕೊಟ್ಟ ಸರ್ವೋತ್ತಮವಾದ ವಸ್ತ್ರವನ್ನೂ ಅಂಗರಾಗವನ್ನೂ ಆಭರಣಗಳನ್ನೂ, ಹಾರವನ್ನೂ, ಮೈಥಿಲಿಯು ಸ್ವೀಕರಿಸಿದಳು. ಈ ಉಡುಗೆ ತೊಡುಗೆಗಳಿಂದ ತನ್ನ ರೂಪು ಲಾವಣ್ಯಗಳು ವರ್ಧಿಸಿ ಶ್ರೀರಾಮನ ಮನಸ್ಸನ್ನು ಸೆರೆ ಹಿಡಿಯಬಲ್ಲದೆಂದೂ ಅರಣ್ಯದ ಕಾಮರೂಪಿಗಳಾಗಿ ಬರಬಹುದಾದ ಮೋಹಿನಿಯರುಗಳಿಗೆ ಶ್ರೀರಾಮ ಮಣಿಯಲಾರದಂತೆ ಮಾಡುತ್ತದೆಂದೂ ಭವಿಷ್ಯದಲ್ಲಿ ಒದಗಬಹುದಾದ ರಾಘವನ ಶತ್ರುಗಳಿಗೆ ಈ ನನ್ನ ರೂಪೇ ಕಾರಣವಾಗಬಹುದೆಂದೂ ನಿಶ್ಚಯಿಸಿದಳು. ಅನಸೂಯೆ ನೀಡಿದ ಪಾರಿತೋಷಕಗಳಿಗೆ ಈ ಮಹಾತ್ಮೆ ಇರುವುದೆಂಬುದನ್ನು ಅರಿತಳು.

ಸೀತೆಯ ಸ್ವಯಂವರದ ವಿವರವನ್ನು ಸೀತೆಯ ಬಾಯಿಯಿಂದಲೇ ಕೇಳಿ ಹರ್ಷಗೊಂಡಳು. ಸೀತೆಯ ಧರ್ಮಜ್ಞಾನಕ್ಕೆ ಸಂತೋಷಪಟ್ಟು 'ಮಗಳೆ ಎಷ್ಟು ಚೆನ್ನಾಗಿ ಎಷ್ಟು ಇಂಪಾಗಿ ಕಥೆಯನ್ನು ಹೇಳಿದೆ. ಮಾತುಗಳನ್ನು ಎಷ್ಟು ಸ್ಫುಟವಾಗಿ ಉಚ್ಚರಿಸಿದೆ. ಎಷ್ಟು ಮಧುರವಾಗಿ ಮಾತನಾಡುತ್ತೀಯೆ' ಎಂದು ಹೊಗಳಿ ಒಡವೆಗಳನ್ನು ಧರಿಸಿ ರಾಮನ ಬಳಿಗೆ ಹೋಗುವಂತೆ ತಿಳಿಸಿದಳು. ಆಗ ಸುಂದರಿಯಾದ ಭೂಜಾತಿ ಅನುಸೂಯೆಯಿಟ್ಟಿದ್ದ ಒಡವೆಗಳನ್ನು ಧರಿಸಿ ನಮಸ್ಕರಿಸಿ ಪತಿಯಿದ್ದೆಡೆಗೆ ಬಂದಳು. ಸೀತೆ ಸರ್ವಾಲಂಕರ ಭೂಷಿತಳಾಗಿ ಬರುತ್ತಿರುವುದನ್ನು ಕಂಡು ಅಚ್ಚರಿಪಟ್ಟನು. ನಡೆದ ಸಂಗತಿಯನ್ನೆಲ್ಲಾ ಸೀತೆ ತಿಳಿಸಿದಳು. ಮನುಷ್ಯಮಾತ್ರರಿಗೆ ದುರ್ಲಭವಾದ ಅಂಥ ಸತ್ಕಾರವು ಜಾನಕಿಗೆ ದೊರಕಿತೆಂದು ತಿಳಿದು ಶ್ರೀರಾಮ ಲಕ್ಷ್ಮಣರು ಹರ್ಷಗೊಂಡರು. ವೈದೇಹಿಗೆ ಸೌಭಾಗ್ಯವೂ ಭವಿಷ್ಯದ ಕ್ರತುವಿಗೆ ತಮ್ಮ ಧ್ಯೇಯ ಸಾಕ್ಷಾತ್ಕಾರಕ್ಕೆ ರಕ್ಷಾಬಂಧನವೂ ಸಿಕ್ಕಿತೆಂದು ಹರ್ಷಗೊಂಡನು.

ಅತ್ರಿಮಹರ್ಷಿಯ ಆಶ್ರಮದಲ್ಲಿಯೇ ಆ ರಾತ್ರಿಯನ್ನು ಕಳೆದರು. ಬೆಳಿಗ್ಗೆ ಋಷಿಗಳ ಆಶೀರ್ವಾದ ಪಡೆಯಲು ಹೋದಾಗ, ಆ ಋಷಿಗಳು 'ಈ ಮಹಾರಣ್ಯದಲ್ಲಿ ಮನುಷ್ಯರನ್ನು ತಿನ್ನತಕ್ಕ ರಾಕ್ಷಸರು ನಾನಾ ರೂಪಗಳನ್ನು ಧರಿಸಿ ವಾಸವಾಗಿದ್ದಾರೆ. ರಕ್ತಪಾನ ಮಾಡುವ ದುಷ್ಟ ಮೃಗಗಳಿಂದಲೂ ಕೂಡಿದೆ. ಇವುಗಳ ಕಾಟವನ್ನು ತಪ್ಪಿಸು'[೧] ಎಂದು ಬೇಡಿ ಆಶೀರ್ವದಿಸಿದರು.

---

[೧] ಅದೇ, ಸರ್ಗ ೧೧೯.

ಮೇಘ ಮಂಡಲವನ್ನು ಭೇದಿಸಿಕೊಂಡು ಸೂರ್ಯನು ನುಗ್ಗಿ ಹೋಗುವಂತೆ ರಾಮಲಕ್ಷ್ಮಣ, ಸೀತೆ ದಂಡಕಾರಣ್ಯವನ್ನು ಪ್ರವೇಶಿಸಿದರು.

**ಅರಣ್ಯಕಾಂಡ**

ಮನೋಹರವೂ ಮನಮೋಹಕವೂ ಪವಿತ್ರವೂ ಆದ ಋಷ್ಯಾಶ್ರಮ ಸಿಕ್ಕಿದವು. ಅವುಗಳ ಬಳಿ ಅಪ್ಸರ ಸ್ತ್ರೀಯರು ಪೂಜೆ ಮಾಡಿ ನರ್ತಿಸುತ್ತಿದ್ದರು. ದಿವ್ಯಜ್ಞಾನಿಗಳಾದ ಆ ಮಹರ್ಷಿಗಳು ರಾಮನನ್ನೂ ಕೀರ್ತಿವಂತಳಾದ ವೈದೇಹಿಯನ್ನು ಸಂತೋಷದಿಂದ ಬರಮಾಡಿಕೊಂಡರು. ಅಲ್ಲಿಯ ಮುನಿಗಳು ನಾವು ನಿನ್ನ ರಾಜ್ಯದ ಪ್ರಜೆಗಳು ನೀವು ನಮಗೆ ತಂದೆ-ತಾಯಿಗಳಂತೆ ನಮ್ಮನ್ನು ರಾಕ್ಷಸರ ಹಾವಳಿಯಿಂದ ರಕ್ಷಿಸಬೇಕು ಎಂದು ಪ್ರಾರ್ಥಿಸಿದರು. ಆಗ ಶ್ರೀರಾಮನು ಹಾಗೇ ಆಗಲಿ ಎಂದು ಸಮ್ಮತಿಸಿದನು. ವೈದೇಹಿಗೆ ಮಾತೃತ್ವದ ಸ್ಥಾನ ಲಭಿಸಿತು. ಅವರನ್ನು ರಕ್ಷಿಸುವುದರಲ್ಲಿ ತಾಯಿಯ ಹೊಣೆಗಾರಿಕೆಯು ಮುಖ್ಯವಾಗಿರುತ್ತದೆ. ಅವರಿಗೆ ಅಭಯವಿತ್ತು ಮುಂದೆ ಸಾಗಿದರು. ಭಯಂಕರಾಕೃತಿಯುಳ್ಳ ವಿರಾಧನೆಂಬ ರಾಕ್ಷಸನು ಇವರಿಗೆ ಎದುರಾದನು 'ಸುಂದರಿಯಾದ ಆ ಹೆಂಗಸರು ನನ್ನ ಹೆಂಡತಿಯಾಗುವಳು, ನಿಮ್ಮ ನೆತ್ತರು ಕುಡಿವೆನು' ಎಂದು ಆರ್ಭಟಿಸುತ್ತಾನೆ. ಸೀತೆ ತತ್ತರಿಸಿ ಹೋದಳು. ಚಿಂತಾಕುಲನಾಗಿ ರಾಮ 'ತಂದೆಯ ಮರಣಕ್ಕಿಂತಲೂ ನನ್ನ ರಾಜ್ಯವನ್ನು ಅಪಹರಿಸಿದಕ್ಕಿಂತಳು ಸೀತೆಯನ್ನು ಅನ್ಯನೊಬ್ಬನು ಮುಟ್ಟಿದ್ದರಿಂದ ಆಗಿರುವ ದುಃಖವು ಹೆಚ್ಚಾಗಿದೆ' ಎಂದು ಕಣ್ಣೀರು ತುಂಬಿಕೊಳ್ಳುತ್ತಾನೆ.[೧] ರಾಮಲಕ್ಷ್ಮಣರು ಬಾಣ ಪ್ರಯೋಗ ಮಾಡಿದರು. ತತ್ತರಿಸಿದ ವಿರಾದ ಸೀತೆಯನ್ನು ಬಿಟ್ಟು ಸಹೋದರರನ್ನೆ ಎತ್ತಿಕೊಂಡು ಹೊರಟನು. ಅದನ್ನು ಕಂಡ ಸೀತೆ ಅವರನ್ನು ಬಿಟ್ಟು ತನ್ನನ್ನು ಎತ್ತಿಕೊಂಡು ಹೋಗುವಂತೆ ಹೇಳಿ ದುಃಖಿಸುತ್ತಾಳೆ. ಇವಳ ಆರ್ತನಾದವನ್ನು ಕೇಳಿ ಸಹೋದರರು ರಾಕ್ಷಸನನ್ನು ಕೊಲ್ಲಲು ನಿರ್ಧರಿಸಿ ಅವನನ್ನು ಕೊಂದರು. ಜಾನಕಿಗೆ ಪರಪುರುಷರಿಂದ ಉಂಟಾಗಬಹುದಾದ ತೊಂದರೆಯ ಅರಿವಾಯಿತು. ತನ್ನ ಪಾತಿವ್ರತ್ಯದ ತಪೋಗ್ನಿ ಆ ರಾಕ್ಷಸನನ್ನು ಸುಟ್ಟು ಬೂದಿಮಾಡಬೇಕಿತ್ತು. ಆದರೆ ಹಾಗಾಗಲಿಲ್ಲ. ತನ್ನ ತಪಸ್ಸು ಇನ್ನೂ ಪರಿಪಕ್ವವಾಗದಿರುವುದರಿಂದ ತನ್ನ ತಪಸ್ಸನ್ನು ತೀವ್ರಗೊಳಿಸಿ ತ್ರಿಕರಣಶುದ್ಧಿಯ ಗದ್ದುಗೆಯನ್ನೇರಬೇಕೆಂದು ಮನವರಿಕೆಯಾಯಿತು ಜಾನಕಿಗೆ ಮೂವರು ಪ್ರಯಾಣವನ್ನು ಮುಂದುವರೆಸಿದರು.

ಶರಭಂಗ ಋಷಿಗಳ ಆಶ್ರಮಕ್ಕೆ ಬಂದು ಆಗಮಿಸಿದ್ದ ಇಂದ್ರನನ್ನು ಕಂಡು, ಆತ್ಮಾರ್ಪಣೆ ಮಾಡಿಕೊಂಡ ಶರಭಂಗರ ದರ್ಶನಾಶೀರ್ವಾದವನ್ನು ಪಡೆದು ಸುತೀಕ್ಷ್ಣ ಋಷಿಗಳ ಆಶ್ರಮವನ್ನು ತಲುಪಿದರು. ಅವರ ಆತಿಥ್ಯವನ್ನು ಸ್ವೀಕರಿಸಿ. ಶ್ರೀರಾಮನು ಇನ್ನೂ ಮುಂದೆ ಹೋಗುವ ಬಯಕೆಯನ್ನು ತಿಳಿಸಿದನು. ಸೀತಾದೇವಿ ಬತ್ತಳಿಕೆ, ಧನಸ್ಸು ಮತ್ತು ಖಡ್ಗಗಳನ್ನು ಆ ಅಣ್ಣ ತಮ್ಮಂದಿರಿಗೆ ತಂದುಕೊಟ್ಟು ಪ್ರಯಾಣಕ್ಕೆ ಅನುಕೂಲಪಡಿಸಿದಳು.

---

[೧] ಅರಣ್ಯಕಾಂಡ ಸರ್ಗ ೨.

ವನಪ್ರಯಾಣದಲ್ಲಿ ತಪಸ್ಸು ಬ್ರಹ್ಮಚರ್ಯವ್ರತವನ್ನು ಆಚರಿಸಿ ಸರ್ಗವನ್ನು ಪಡೆದ ಋಷಿಗಳನ್ನು ಕಂಡಿದ್ದ ಸೀತೆ, ಅಲ್ಲದೆ ಸನಾತನಧರ್ಮ, ಆರ್ಯ ಸಂಸ್ಕೃತಿಯನ್ನು ನೆನೆದು ಕಾರಣವಿಲ್ಲದೆ ರಾಕ್ಷಸರನ್ನು ಕೊಲ್ಲುವುದರ ಬಗ್ಗೆ ಅಸಮಾಧಾನವನ್ನು ವ್ಯಕ್ತಪಡಿಸಿದಳು. 'ಆರ್ಯಪುತ್ರ ನೀನು ಮಹತ್ತರವಾದ ಧರ್ಮ ಮಾರ್ಗವನ್ನು ಹಿಡಿದಿದ್ದಿಯೇ ಅತ್ಯಂತ ಸೂಕ್ಷ್ಮವಾಗಿ ವಿಚಾರ ಮಾಡಿದರೆ ಮಾತ್ರ ಈ ಧರ್ಮಮಾರ್ಗದಲ್ಲಿ ನಡೆಯಲು ಸಾಧ್ಯ. ಕಾಮಜನ್ಯವಾದ ವ್ಯಸನವನ್ನು ತೊರೆದವನು. ಧರ್ಮವನ್ನು ಆಚರಿಸಬಲ್ಲ, ಕಾಮಜನ್ಯವಾದ ವ್ಯಸನಗಳು ಮೂರು ಸುಳ್ಳು ಹೇಳುವುದು, ಪರಸ್ತ್ರೀ ವ್ಯಸನ ಮತ್ತು ವೈರಕಾರಣವಿಲ್ಲದೆ ಮಾಡುವ ಪರಹಿಂಸೆ, ಸುಳ್ಳು ನಿನ್ನಲ್ಲಿ ಯಾವಾಗಲೂ ಸುಳಿದೇ ಇಲ್ಲ. ಸುಳಿಯುವುದೂ ಇಲ್ಲ. ಪರಸ್ತ್ರೀ ವ್ಯಸನವಾದರೂ ಅಷ್ಟೆ. ಏಕಪತ್ನೀ ವ್ರತಾಧಾರಿಯಾಗಿ ವೀರವ್ರತವನ್ನು ಆಚರಿಸುತ್ತಿದ್ದಿಯೇ ನೀನು ಜಿತೇಂದ್ರಿಯನೆಂಬುದು ನನಗೆ ಗೊತ್ತು. ಆದರೆ ನಿಷ್ಕಾರಣವಾಗಿ ಪರಹಿಂಸೆ ಮಾಡುವುದು ಭಯಂಕರವಾದದ್ದು. ಅದು ಅವಿಚಾರದಿಂದ ಸಂಭವಿಸುತ್ತದೆ. ವೀರಾಗ್ರಣಿ, ದಂಡಕಾರಣ್ಯದಲ್ಲಿ ವಾಸಿಸುವ ಋಷಿಗಳನ್ನು ರಕ್ಷಿಸುವುದಕ್ಕಾಗಿ ರಾಕ್ಷಸರನ್ನು ಯುದ್ಧದಲ್ಲಿ ಸಂಹರಿಸುತ್ತೇನೆಂದು ಪ್ರತಿಜ್ಞೆ ಮಾಡಿದ್ದೀಯೆ ಅದಕ್ಕೋಸ್ಕರವೇ ಧನುರ್ಬಾಣಗಳನ್ನು ಧರಿಸಿ ದಂಡಕಾರಣ್ಯ ಪ್ರವೇಶಿಸಿದ್ದೀಯೆ. ನಿನ್ನ ಶ್ರೇಯಸ್ಸಿಗೋಸುಗ ತಪಿಸುತ್ತಿರುವ ನನಗೆ ಚಿಂತೆ ಆವರಿಸಿದೆ. ಇನ್ನು ಮುಂದಕ್ಕೆ ಹೋಗುವುದು ನನಗಿಷ್ಟವಿಲ್ಲ. ಇಲ್ಲಿ ರಾಕ್ಷಸರ ಸಂಚಾರವಿದೆ. ಅವರನ್ನು ಕಂಡಾಗ ಬಾಣ ಪ್ರಯೋಗ ಮಾಡುವೆ ಕ್ಷತ್ರಿಯನ ಬಳಿ ಧನುಸ್ಸಿರುವುದು ಬೆಂಕಿಯ ಹತ್ತಿರ ಸೌದೆಯಿರುವುದು ಎರಡೂ ಒಂದೇ. ಹಿಂದೆ ದೇವೇಂದ್ರನು ಒಬ್ಬ ಋಷಿಯ ತಪೋಭಂಗಕ್ಕೋಸ್ಕರ ಒಬ್ಬ ಯೋಧನ ರೂಪವನ್ನು ಧರಿಸಿ ಖಡ್ಗವನ್ನು ಹಿಡಿದು ಆಶ್ರಮಕ್ಕೆ ಬಂದನು. ಆ ಆಶ್ರಮದಲ್ಲಿ ಪುಣ್ಯಕರವಾದ ತಪಸ್ಸಿಗಾಗಿ ಕುಳಿತಿರುವ ಆ ತಪಸ್ವಿಯ ಬಳಿ ಹರಿತವಾದ ಆ ಉತ್ತಮ ಖಡ್ಗವನ್ನು ಇಟ್ಟಿರುವಂತೆ ಕೊಟ್ಟು ಹೋದನು. ತಪಸ್ವಿಯು ಆ ಆಯುಧವನ್ನು ಪಡೆದು ಅದರ ರಕ್ಷಣೆಯಲ್ಲಿ ಆಸಕ್ತನಾಗಿ ತನ್ನ ನಂಬಿಕೆಗಾಗಿ ಅದನ್ನು ಕಾಪಾಡಿಕೊಂಡೇ ಆ ಕಾಡಿನಲ್ಲಿ ತಿರುಗುತ್ತಿದ್ದನು. ಫಲಮೂಲಗಳನ್ನು ತರಲು ಎಲ್ಲಿ ಹೋದರೂ ಆ ಕತ್ತಿಯ ಒತ್ತೆಯನ್ನು ರಕ್ಷಿಸಿಕೊಳ್ಳುವುದರಲ್ಲಿ ಗಮನವುಳ್ಳವನಾಗಿ ಅದಿಲ್ಲದೆ ಹೋಗುತ್ತಿರಲಿಲ್ಲ. ನಿತ್ಯವೂ ಆಯುಧಪಾಣಿಯಾಗಿ ಹೋಗುತ್ತಿದ್ದ ಆ ತಪೋಧನನು ಕ್ರಮೇಣ ತಪಸ್ಸಿನಲ್ಲಿ ದೃಢಬುದ್ಧಿಯನ್ನು ಬಿಟ್ಟು ಹಿಂಸಾಕೃತ್ಯದಲ್ಲಿ ಬುದ್ಧಿ ತಾಳಿದನು. ಹಿಂಸಾಕೃತ್ಯದಲ್ಲಿ ಆಸಕ್ತನಾಗಿ ಉನ್ಮತ್ತನಾಗಿ ಅಧರ್ಮದಿಂದ ಪೀಡಿತನಾಗಿ ಆ ಆಯುಧದ ಸಹವಾಸದಿಂದ ಋಷಿಯು ನರಕಕ್ಕೆ ಹೋದನು. ಆದ್ದರಿಂದ ನಿನಗೆ ನನ್ನಲ್ಲಿರುವ ಸಲಿಗೆಯಿಂದಲೂ, ಪ್ರೇಮದಿಂದಲೂ ಈ ಮಾತನ್ನು ನಾನು ಹೇಳುತ್ತಿದ್ದೇನೆ. ನಿನಗೆ ಗೊತ್ತಿರುವುದನ್ನು ನೆನಪು ಮಾಡಿಕೊಡುತ್ತಿದ್ದೇನೆ. ಕಾಡಿನಲ್ಲಿ ವ್ರತಾನುಷ್ಠಾನಗೈಯುತ್ತ ಇರುವವರನ್ನೂ ಆರ್ತರನ್ನೂ ರಕ್ಷಿಸುವುದಕ್ಕಾಗಿ ವೀರಕ್ಷತ್ರಿಯರು ಆ ಧನುಸ್ಸನ್ನು ಉಪಯೋಗಿಸಬೇಕೆಂಬುದೇನೋ ಸರಿಯೆ. ಆದರೆ ಆಯುಧಗಳಿಗೂ ವನವಾಸಕ್ಕೂ ಕ್ಷತ್ರಿಯಧರ್ಮಕ್ಕೂ ತಪಸ್ಸಿಗೂ ಹೊಂದಾಣಿಕೆಯೆಲ್ಲಿ? ಇವು ಒಂದಕ್ಕೊಂದು ವಿರುದ್ಧವಾಗಿರುವುವು. ನಾವು ವನವಾಸ ಧರ್ಮವನ್ನು ಪಾಲಿಸೋಣ ಪೂಜ್ಯನೆ ಆಯುಧಗಳನ್ನು ಉಪಯೋಗಿಸುವುದರಿಂದ ಪಾಪಬುದ್ಧಿಯೂ ಅಂಕುರಿಸುತ್ತದೆ. ಮತ್ತೆ ಅಯೋಧ್ಯೆಗೆ ಹಿಂತಿರುಗಿ ಹೋಗಿ ಕ್ಷತ್ರಿಯ ಧರ್ಮವನ್ನು ಆಚರಿಸುವೆಯೆಂತೆ ರಾಜ್ಯವನ್ನು

ತೊರೆದು ನೀನು ತಪಸ್ಸಿನಲ್ಲಿ ಆಸಕ್ತನಾದ ಋಷಿಯಾದಲ್ಲಿ ನನ್ನ ಅತ್ತೆಯರಿಗೂ, ಮಾವನಿಗೂ ಅಕ್ಷಯವಾದ ಪ್ರೀತಿಯುಂಟಾಗುವುದು. ಧರ್ಮದಿಂದ ಅರ್ಥವು ಉದ್ಭವಿಸುತ್ತದೆ. ಧರ್ಮದಿಂದ ಸುಖವು ಉದ್ಭವಿಸುತ್ತದೆ. ಧರ್ಮದಿಂದ ಎಲ್ಲವನ್ನೂ ಪಡೆಯಬಹುದು. ಈ ಜಗತ್ತು ಧರ್ಮವನ್ನು ಅವಲಂಭಿಸಿದೆ. ಸಮಯೋಚಿವಾದ ನಿಯಮಗಳಿಂದ ದೇಹವನ್ನು ಪ್ರಯತ್ನಪಟ್ಟು ದಂಡಿಸಿ ಸಮರ್ಥರಾದರು ಧರ್ಮವನ್ನು ಗಳಿಸುವರು. ಸುಖದಿಂದ ಸುಖವು ದೊರಕುವುದಿಲ್ಲ. ಸೌಮ್ಯನೇ ನೀನು ಸದಾ ಪರಿಶುದ್ಧ ಬುದ್ಧಿಯಿಂದ ತಪೋವನದಲ್ಲಿ ಧರ್ಮವನ್ನು ಆಚರಿಸು. ನಿನಗೆ ಎಲ್ಲವೂ ತಿಳಿದೇ ಇರುವುದು. ಹೆಂಗಸರಿಗೆ ಸಹಜವಾದ ಚಾಪಲ್ಯದಿಂದ ನಾನು ಹೇಳಿದೆ. ತಮ್ಮನೊಡನೆ ನಿನ್ನ ಸ್ವಬುದ್ಧಿಯನ್ನು ಉಪಯೋಗಿಸಿ ವಿಚಾರ ಮಾಡಿ ಹೇಗೆ ಒಪ್ಪಿಗೆಯೋ ಹಾಗೆ ಬೇಗನೆ ಮಾಡುವವನಾಗು[೧] ಎಂದಳು.

ಜಾನಕಿಯ ಈ ಔಚಿತ್ಯಪೂರ್ಣವಾದ ಮಾತನ್ನು ಕೇಳಿ ಶ್ರೀರಾಮ 'ನನ್ನ ಮೇಲಿನ ಪ್ರೀತಿಯಿಂದ ಹೀಗೆ ಹೇಳುತ್ತಿರುವೆ. ಮುನಿಗಳು ರಾಕ್ಷಸರಿಂದ ತಮ್ಮನ್ನು ರಕ್ಷಿಸುವಂತೆ ಕೇಳಿಕೊಂಡರು ಅವರನ್ನು ಸರ್ವವಿಧದಲ್ಲಿಯೂ ರಕ್ಷಿಸುವುದಾಗಿ ಮಾತು ಕೊಟ್ಟಿರುವುದರಿಂದ ಇದನ್ನು ತಪ್ಪಲಾರೆ. ನನ್ನ ಪ್ರಾಣವನ್ನಾದರೂ ತೊರೆದೆನು. ನಿನ್ನನ್ನಾದರೂ ಲಕ್ಷ್ಮಣನನ್ನಾದರೂ ಬಿಟ್ಟೇನು. ಆದರೆ ಕೊಟ್ಟ ಮಾತನ್ನು ಮಾತ್ರ ತಪ್ಪಲಾರೆ. ಇದು ನನ್ನ ಕರ್ತವ್ಯ ಎಂಬುದರಲ್ಲಿ ಸಂದೇಹವಿಲ್ಲ. ನನ್ನ ಸಹಧರ್ಮಚಾರಿಣಿ ನೀನು ತಪಸ್ವಿಗಳು ಗಳಿಸಿದ ಪುಣ್ಯದಲ್ಲಿ ಕಾಲುಭಾಗ ರಾಜನಿಗೆಂಬುದನ್ನು ಬಲ್ಲೆ. ವೀರವ್ರತಾತ್ಮಕವಾದ, ಪಾತಿವ್ರತ್ಯಾತ್ಮಕವಾದ ಎರಡು ವಂಶಗಳಿಗೂ ಯೋಗ್ಯವಾದ ಧರ್ಮವನ್ನು ಪಾಲಿಸು ಎಂದನು. ಧ್ಯೇಯದ ಪೂರ್ಣದರ್ಶನವಾಗಿ ಸಹಧರ್ಮಾಚರಣೆಗೆ ಅಗತ್ಯವಾದ ವೀರತಪಸ್ಸೇ ಸಾಧನವೆಂದರಿತಳು.

ಮೂವರು ಋಷಿಗಳೊಡನೆ ಮುಂದೆ ಸಾಗಿದರೂ ಇವರಿಗೆ ಪಂಚಾಪ್ಸರ ಸರೋವರ ಸಿಕ್ಕಿತು. ನೃತ್ಯ ಸಂಗೀತದ ಧ್ವನಿಯಿಂದ ತುಂಬಿದ ಆ ಸರೋವರದ ಬಗ್ಗೆ ಕುತೂಹಲಗೊಂಡ ಶ್ರೀರಾಮನಿಗೆ ಜೊತೆಯಲ್ಲಿಯೇ ಇದ್ದ ಬ್ರಾಹ್ಮಣೋತ್ತಮನು ಉತ್ತರಿಸಿದನು. ಮಾಂಡಕರ್ಣಿಯೆಂಬ ಋಷಿ ಹತ್ತು ಸಾವಿರ ವರ್ಷ ವಾಯುಭಕ್ಷಕನಾಗಿ ನೀರಿನಲ್ಲಿ ನಿಂತು ತಪಸ್ಸು ಮಾಡಿದ ದೇವತೆಗಳು ಅವನ ತಪೋಜ್ವಾಲೆಯನ್ನು ತಡೆಯಲಾರದೆ ಇಂದ್ರ ಪಂಚ ಅಪ್ಸರೆಯರನ್ನು ಕಳಿಸಿದ. ಋಷಿ ಆ ಅಪ್ಸರೆಯರಿಗೆ ಸೋತು ಸರೋವರದ ಕೆಳಗೆ ಸೌಧವನ್ನು ಕಟ್ಟಿಕೊಂಡು ಲೋಲುಪ್ತನಾಗಿದ್ದಾನೆ ಎಂದು ಮಾಂಡಕರ್ಣಿಯಂತ ಮಹಾಮುನಿ ಸ್ತ್ರೀಯರಿಗೆ ಸೋತು ಹೋದದ್ದನ್ನು ಕೇಳಿ ಸೀತೆ ಆಶ್ಚರ್ಯಚಕಿತಳಾದಳು. ಜಿತೇಂದ್ರಿಯಳಾಗುವುದರ ಕಡೆಗೆ ಅವಳ ಮನಸ್ಸು ಆಲೋಚಿಸುತ್ತಿತ್ತು. ಆ ಪಂಚಾಪ್ಸರ ಸರೋವರದ ಹತ್ತಿರವೇ ಅನೇಕ ಋಷ್ಯಾಶ್ರಮಗಳಿದ್ದವು. ಇವುಗಳ ಮಧ್ಯೆ ಪರ್ಣಕುಟೀರವನ್ನು ಕಟ್ಟಿ ಕಾಮ ಪ್ರಚೋದನಾತ್ಮಕವಾದ ಈ ಪರಿಸರದಲ್ಲಿ ಸೀತಾರಾಮರು ದಾಂಪತ್ಯ ಜೀವನದಲ್ಲಿ ಬ್ರಹ್ಮಚರ್ಯ ವ್ರತವನ್ನು ತ್ರಿಕರಣ ಶುದ್ಧಿಯಿಂದ ಆಚರಿಸಿದರು. ಇದೇ ಪರಿಸರದಲ್ಲಿ ಹತ್ತು ವರ್ಷಗಳನ್ನು ಕಳೆದರು. ಸುತೀಕ್ಷ್ಣರ ಆದೇಶದಂತೆ ಮತ್ತೆ ಅವರ ದರ್ಶನ ಪಡೆಯಲು ಹೋದರು. ಅಲ್ಲಿ ಸ್ವಲ್ಪಕಾಲ ತಂಗಿದ್ದು

---

[೧] ಅರಣ್ಯಕಾಂಡ ಸರ್ಗ ೯.

ಅಗಸ್ತ್ಯರ ಆಶ್ರಮಕ್ಕೆ ಬಂದು ಅವರ ಆತಿಥ್ಯವನ್ನು ಸ್ವೀಕರಿಸಿ ಅವರು ಕರುಣಿಸಿದ ವೈಷ್ಣವ ಧನುಸ್ಸನ್ನೂ ಅಕ್ಷಯಾಸ್ತ್ರಗಳಿರುವ ಬತ್ತಳಿಕೆಗಳನ್ನು ಖಡ್ಗಗಳನ್ನು ತೆಗೆದುಕೊಂಡು ಮಹದರ್ಥಗರ್ಭಿತವಾದ ಅವರ ಆಶೀರ್ವಾದವನ್ನು ಪಡೆದರು.

ಕೋಮಲೆಯಾದ ಸೀತೆ ನಿನ್ನ ಮೇಲಿನ ಪ್ರೀತಿಯಿಂದ ಘೋರ ಅರಣ್ಯವಾಸಕ್ಕೆ ಬಂದಿರುವಳಲ್ಲ ಎಂದು ಮೆಚ್ಚಿದರು. ಜಗತ್ತು ಸೃಷ್ಟಿಯಾದಂದಿನಿಂದ ಸ್ತ್ರೀಯರು ತಮಗೆ ಅನುಕೂಲ ಸ್ಥಿತಿಯಲ್ಲಿರುವ ಪುರುಷನನ್ನು ಅನುಸರಿಸುವುದು ಕಷ್ಟಸ್ಥಿತಿಯಲ್ಲಿರುವವರನ್ನು ಬಿಟ್ಟು ಬಿಡುವುದು ಅವರ ಸ್ವಭಾವವಾಗಿರುತ್ತದೆ. ಆದರೆ ಸೀತೆ ಅರುಂಧತಿ ದೇವಿಯಂತೆ ಮಹಾಪತಿವ್ರತಿಯಲ್ಲಿ ಅಗ್ರಗಣ್ಯಳು ಎಂದು ಮನಸಾರೆ ಹೊಗಳಿ ಹಾರೈಸಿ ಅವರನ್ನು ಬೀಳ್ಕೊಡುತ್ತಾರೆ.[೧]

**ಪಂಚವಟಿಯಲ್ಲಿ ಸೀತಾದೇವಿ**

ಅಗಸ್ತ್ಯರು ತಿಳಿಸಿದಂತೆಯೇ ರಾಮ ಲಕ್ಷ್ಮಣ ಸೀತಾ ಸಮೇತನಾಗಿ ಪಂಚವಟಿಗೆ ಬಂದು ಯೋಗ್ಯವಾದ ಸ್ಥಳದಲ್ಲಿ ಕುಟೀರವನ್ನು ಕಟ್ಟಿಕೊಂಡು ವಾಸ ಮಾಡತೊಡಗಿದರು. ಇಲ್ಲಿಗೆ ಬಂದ ರಾವಣನ ತಂಗಿ ಶೂರ್ಪಣಿಖಿ ದಾಶರಥಿಗಳನ್ನು ಕಾಮಿಸಿ ಭಗ್ನಮನೋರಥಳಾಗಿ ಸೀತಾದೇವಿಯನ್ನು ನುಂಗಲು ಪ್ರಯತ್ನಿಸಿದಾಗ. ಲಕ್ಷ್ಮಣ ಅವಳನ್ನು ವಿಕಾರಗೊಳಿಸಿದ. ತಂಗಿಗಾದ ಅವಮಾನಕ್ಕೆ ಅಣ್ಣಂದಿರಾದ ಖರದೂಷಣರು ಹದಿನಾಲ್ಕು ಸಾವಿರ ರಾಕ್ಷಸ ಸೇನಾಸಮೇತರಾಗಿ ಪಂಚವಟಿಯ ಮೇಲೆ ನುಗ್ಗಿದರು. ಶ್ರೀರಾಮನು ಲಕ್ಷ್ಮಣ ಸೀತೆಯರನ್ನು ಮರೆಯಲ್ಲಿರಿಸಿ ಏಕಾಂಗಿಯಾಗಿ ರಾಕ್ಷಸರನ್ನೆಲ್ಲಾ ಸಂಹರಿಸಿದನು. ಋಷಿಗಳೆಲ್ಲರು ರಾಮನನ್ನು ಹೊಗಳಿದರು. ಸೀತೆಯು ತನ್ನ ಪತಿಯ ಪರಾಕ್ರಮವನ್ನು ಕಂಡು ಅಪ್ಪುಗೆಯ ಬಹುಮಾನವಿತ್ತಳು.

ಜಾನಕಿ ವೀರಪಣವಾಗಿ, ಕ್ಷತ್ರಿಯ ರಾಣಿಯಾಗಿ, ವೀರವ್ರತಧಾರಿಯಾದ ದಾಶರಥಿಯ ಕೈಹಿಡಿದು ಅರಣ್ಯಕ್ಕೆ ನಡೆದುಬಂದದ್ದು ಯಾವ ಪರೀಕ್ಷೆಗೆ ಒಳಗಾಗದೆಯೇ ವ್ಯರ್ಥ ವಾಗುತ್ತದೆಯೇ ಎಂಬ ಶಂಕೆ ಅವಳನ್ನು ಆವರಿಸಿತ್ತು. ದಂಡಕಾರಣ್ಯವನ್ನು ಪ್ರವೇಶ ಮಾಡುವಾಗ ತಾನೇ ರಾಮಲಕ್ಷ್ಮಣರ ಬಾಣ ಬತ್ತಳಿಕೆ ಬಿಲ್ಲನ್ನು ಎತ್ತಿಕೊಟ್ಟುದರ ಉದ್ದೇಶ ಸಾಧಿತವಾಗಲಿಲ್ಲ. ಹುಟ್ಟಿನಿಂದಲೂ ಸ್ತ್ರೀ ಕಂಟಕರ ಸಂಹಾರಕ್ಕೆ ಪ್ರಥಮ ಹೆಜ್ಜೆಯನ್ನಿಟ್ಟು ಬಂದಿರುವ ನಾನು ಈ ಅಂತಿಮ ಘಟ್ಟದಲ್ಲಿ ಹಿಮ್ಮೆಟ್ಟಬಹುದೆ ಎಂಬ ಅನುಮಾನ ಅವಳನ್ನು ಆವರಿಸಿತ್ತು. ಅನಸೂಯೆ ತನ್ನನ್ನು ಸಾವಿತ್ರಿಗೆ ಹೋಲಿಸಿದಳು. ಅಗಸ್ತ್ಯರು ಅರುಂಧತಿಗೆ ಸಮಾನವೆಂದರು. ಅಂಥ ಮಹತ್ವಪೂರ್ಣವಾದ ಪಾತಿವ್ರತ್ಯವನ್ನು ಪರೀಕ್ಷೆಗೆ ಒಡ್ಡುವ ಯಾವ ಸಂದರ್ಭಗಳು ಸಂಭವಿಸಲಿಲ್ಲ. ಅವರು ನನ್ನನ್ನು ಸುಮ್ಮನೆ ಹೊಗಳಿದರು ಎಂದು ಮನದಲ್ಲಿಯೇ ಮರುಗುತ್ತಿದ್ದಳು.

ಸೀತೆಯ ಸೌಂದರ್ಯವರ್ಣನೆಗೆ ಮನಸೋತ ಹೆಣ್ಮರುಗಳನಾದ ರಾವಣನು ರಾಮನ ಪರಾಕ್ರಮವನ್ನು ಆತನಿಂದ ತನ್ನ ಸೇನೆಗಾದ ಪರಾಭವವನ್ನು ನೋಡಿ ಶಕ್ತಿ ಬಲಕ್ಕಿಂತ

---

[೧] ಅರಣ್ಯಕಾಂಡ ಸರ್ಗ ೧೩.

ಯುಕ್ತಿಮೇಲು ಎಂಬುದನ್ನು ಅರಿತು ಕುಟಿಲೋಪಾಯದಿಂದ ವೈದೇಹಿಯನ್ನು ಅಪಹರಿಸಬೇಕೆಂದು ನಿಶ್ಚಯಿಸಿ ಮಾರೀಚನ ಸಹಾಯವನ್ನು ಕೋರಿದನು. ಮಾರೀಚನ ಹಿತೋಪದೇಶಕ್ಕೆ ಕಿವಿಗೊಡದೆ ತನ್ನ ಆಜ್ಞೆಯಂತೆ ನಡೆದುಕೊಳ್ಳಬೇಕೆಂದು ಆಗ್ರಹಪಡಿಸಿದನು. ಮಾರೀಚನು ಅನ್ಯದಾರಿ ಕಾಣದೆ ಬಹುಸುಂದರನಾದ ಸುವರ್ಣ ಮೃಗದ ರೂಪವನ್ನು ತಾಳಿದನು.

ದೃಢಚಿತ್ತಳಾಗಿ ಮಲಗಿದ ಜಾನಕಿ ಪತಿಯು ವಿಧಿಸಿದಂತೆ ಹೊತ್ತಿಗೆ ಮುಂಚೆಯೇ ಎದ್ದು ದೇವರ ಪೂಜೆಗೆ ಹೂ ಆರಿಸಿಕೊಂಡು ಬರಲು ಹೋದಳು. ಹೂವನ್ನು ಬಿಡಿಸುತ್ತಿದ್ದ ಜಾನಕಿ ಮನಮೋಹಕವಾದ ಮಾಯಾಮೃಗವನ್ನು ನೋಡಿದಳು.

ತಸ್ಮಿನ್ನೇವ ತತಃ ಕಾಲೇ ವೈದೇಹೀ ಶುಭಲೋಚನಾ
ಕುಸುಮಾಪಚಯ ವ್ಯಗ್ರಾಪಾದ ಪಾನ ಭ್ಯವರ್ತತ
ಕಾರ್ಣಿಕಾರಾ ಆಶೋಕಾಂಶ್ಚ ಚೂತಾಂಶ್ಚಮಧಿರೇಕ್ಷಣಾ
ವಿಸ್ಮಯೋತ್ಫುಲ್ಲ ನಯನಾ ಸಸ್ನೇಹಂ ಸಮುದೈಕ್ಷತಾ
ಸಚತಾಂ ರಾಮದಯಿತಾಂ ಪಶ್ಯನ್ ಮಾಯಾಮಯೋ ಮೃಗಃ[1]

ಆ ಸಮಯದಲ್ಲಿ ಎಲ್ಲೆಡೆಯೂ ಶುಭವನ್ನೇ ನೋಡಲು ಬಯಸುವ ವೈದೇಹಿಯು ಹೂವುಗಳನ್ನು ಬಿಡಿಸುವುದರಲ್ಲಿ ನಿರತಳಾಗಿದ್ದಳು. ಮದಿರೇಕ್ಷಣೆಯು ಕಾರ್ಣಿಕಾರ ಅಶೋಕ, ಚೂತ ಮುಂತಾದ ವೃಕ್ಷಗಳಲ್ಲಿ ಹೂಗಳನ್ನು ಬಿಡಿಸುತ್ತ ಪ್ರಸನ್ನ ಮುಖಿಯಾಗಿ ಉಲ್ಲಾಸದಿಂದ ಚರಿಸುತ್ತ ಬಂದಳು. ಆ ಮೃಗವನ್ನು ಸೀತೆಯು ಅಚ್ಚರಿಯಿಂದ ಕಣ್ಣರಳಿಸಿ ಪ್ರೇಮದಿಂದ ನೋಡಿದಳು.

ಆ ಮಾಯಾ ಮೃಗವನ್ನು ಕಂಡು ಅತೀಯಾದ ಆನಂದದಿಂದ ಕಣ್ಣರಳಿಸಿ ಪ್ರೇಮದಿಂದ ಅದಕ್ಕೂ ಮೀರಿದ ಸ್ನೇಹದಿಂದ ನೋಡಿದಳು. ಅದನ್ನು ರಾಮ ಲಕ್ಷ್ಮಣರಿಗೆ ತೋರಿಸಿದಳು. ಸೌಮಿತ್ರಿ ನೋಡಿದ ತಕ್ಷಣವೇ ಇದು ಮಾರೀಚನು ಈ ಮಾಯಾಮೃಗ ರೂಪವನ್ನು ಧರಿಸಿರುವನೆಂದು ಗುರುತಿಸಿದನು. ಮೈದುನನ ಎಚ್ಚರಿಕೆ ನುಡಿಗಳ ಪ್ರಭಾವನ್ನಡಗಿಸಲು ಕಾಂತಾ ಸಂಹಿತಾಮೃತವನ್ನು ಪತಿಯ ಕರ್ಣಗಳಿಗೆ ಸೂಸಿದಳು.

ಏವಂ ಬ್ರುವಾಣಂ ಸೌಮಿತ್ರಿಂ ಪ್ರತಿವಾರ್ಯಶುಚಿಸ್ಮಿತಾ
ಉವಾಚಸೀತಾ ಸಂಹೃಷ್ಟಾಚರ್ಮಣಾ ಹೃತ ಚೇತನಾ
ಆರ್ಯಪುತ್ರಾಭಿ ರಾಮೋ ಸಾಮ್ಯಗೋಹರತಿಮೆ ಮನಃ
ಅನ್ಯೆಯನಂ ಮಹಾಬಾಹೋಕ್ರೀಡಾರ್ಥಂ ನೋ ಭವಿಷ್ಯತಿ[2]

ಮೃಗದ ವರ್ಣನೆಯನ್ನು ಮಾಡಿ ಅದನ್ನು ಹಿಡಿದುಕೊಡುವಂತೆ ಪ್ರಚೋದಿಸುವಳು. 'ಆರ್ಯಪುತ್ರ, ಮನೋಹರವಾದ ಈ ಮೃಗವು ನನ್ನ ಮನಸ್ಸನ್ನು ಅಪಹರಿಸುತ್ತಿದೆ. ಮಹಾಬಾಹುವೇ ಇದನ್ನು

---

[1] ಅರಣ್ಯಕಾಂಡ ಸರ್ಗ ೪೨.
[2] ಅದೇ, ಸರ್ಗ ೪೩.

ಹಿಡಿದು ತಾ, ನಮಗೆ ಆಡಿಸುವುದಕ್ಕಾಗುತ್ತದೆ. ನಮ್ಮ ಈ ಆಶ್ರಮ ಪ್ರದೇಶದಲ್ಲಿ ರುಚಿಕರವಾದ ನೋಟಗಳುಳ್ಳ ಸೃಮರಗಳು, ಚಮರೀಮೃಗಗಳು, ಕರಡಿಗಳು, ಹುಲ್ಲೆಗಳ ತಂಡಗಳು, ಕಪಿಗಳು, ಕಿನ್ನರಗಳು ಉತ್ತಮ ರೂಪಿನಿಂದ ಮನೋಹರಗಳಾಗಿ ಗುಂಪುಗುಂಪಾಗಿ ತಿರುಗಾಡುತ್ತವೆ. ಮಹಾಬಾಹುವಾದ ರಾಜನೇ, ಈ ಉತ್ತಮ ಮೃಗದಂತೆ ತೇಜಸ್ಸೂ ಶಾಂತಿಯೂ ಕಾಂತಿಯೂ ಉಳ್ಳ ಮೃಗವನ್ನು ನಾನು ಹಿಂದೆಂದೂ ಕಾಣಲಿಲ್ಲ. ಬಗೆ ಬಗೆಯ ಬಣ್ಣಗಳಿಂದ ಚಿತ್ರಿತವಾದ ಅವಯವಗಳಿಂದ ಕೂಡಿ ರತ್ನದ ಚುಕ್ಕೆಗಳಿಂದ ತುಂಬಿ ಚಂದ್ರನಿಗೆ ಸಮಾನವಾಗಿ ವನವೆಲ್ಲವನ್ನೂ ಬೆಳಗುತ್ತ ಶೋಭಿಸುತ್ತಿದೆ. ಆಹಾ! ಏನು ರೂಪ! ಏನು ಕಾಂತಿ! ಶೋಭಾಯಮಾನವಾದ ಕಂಠಸ್ವರವೇನು! ಅದ್ಭುತವೂ ವಿಚಿತ್ರಾಂಗಗಳ್ಳುದೂ ಆದ ಈ ಮೃಗವು ನನ್ನ ಹೃದಯವನ್ನು ಸೆಳೆಯುವಂತಿದೆ! ಈ ಮೃಗವೂ ಜೀವ ಸಹಿತವಾಗಿಯೇ ನಿನ್ನ ಹಿಡಿತಕ್ಕೆ ಸಿಕ್ಕಿದಲ್ಲಿ ಆಶ್ಚರ್ಯವೇ ಸರಿ. ಎಲ್ಲರಿಗೂ ವಿಸ್ಮಯವನ್ನು ಬೀರುವುದು. ನಾವು ವನವಾಸವನ್ನು ಮುಗಿಸಿಕೊಂಡು ಮತ್ತೆ ರಾಜ್ಯವನ್ನು ಪಡೆದಮೇಲೆ ಈ ಮೃಗವು ನಮ್ಮ ಅಂತಃಪುರವನ್ನಲಂಕರಿಸುವುದು. ಪ್ರಭುವೇ, ಈ ಮೃಗರೂಪವು ಆರ್ಯಪುತ್ರನಿಗೂ ಭರತನಿಗೂ ಅತ್ತೆಯವರಿಗೂ ನನಗೂ ಖಂಡಿತವಾಗಿ ವಿಸ್ಮಯಕಾರಿಯಾಗುವುದು. ಉತ್ತಮವಾದ ಈ ಮೃಗವು ಪ್ರಾಣಸಹಿತವಾಗಿ ನಿನ್ನ ಹಿಡಿತಕ್ಕೆ ಸಿಕ್ಕದಿದ್ದರೆ ಇದರ ಚರ್ಮವು ನನಗೆ ಮನೋಹರವಾಗಿರುವುದು ಕೊಲ್ಲಲ್ಪಟ್ಟ ಈ ಪ್ರಾಣಿಯ ಸುವರ್ಣಮಯವಾದ ಚರ್ಮದ ಮೇಲೆ ದರ್ಭಾಸನವನ್ನು ಹಾಸಿ ಕುಳಿತುಕೊಳ್ಳಲು ಇಚ್ಛಿಸುವೆನು. ಸ್ತ್ರೀಯರಿಗೆ ಆ ಆಸೆಯು ಕ್ರೂರವೂ ಅನುಚಿತವೂ ಆದುದೆಂದು ಪ್ರತೀತಿ ಇದೆ. ಆದರೆ ಈ ಪ್ರಾಣಿಯ ಶರೀರದಿಂದ ನನಗೆ ಆಶ್ಚರ್ಯವುಂಟಾಗಿದೆ' ಎಂದು ತನ್ನ ಮನದ ಆಸೆಯನ್ನು ತೋಡಿಕೊಂಡು ಪ್ರಚೋದಿಸುವಳು.

ಸೀತೆಯ ವರ್ಣನೆಯನ್ನು ಕೇಳಿ, ಸ್ವತಃ ತಾನೇ ಅದನ್ನು ನೋಡಿದ್ದರಿಂದ ಕುತೂಹಲಗೊಂಡ ಶ್ರೀರಾಮನಿಗೆ ಆ ಮೃಗದ ಬಗ್ಗೆ ಆಸೆ ಹುಟ್ಟಿತು. 'ಲಕ್ಷ್ಮಣ, ನೀನು ಎಚ್ಚರಿಕೆಯಿಂದ ಸನ್ನದ್ಧವಾಗಿ ತಪ್ಪದೆ ಮೈಥಿಲಿಯನ್ನು ರಕ್ಷಿಸುತ್ತಿರು, ನಮ್ಮ ಕರ್ತವ್ಯವೆಲ್ಲವೂ ಮುಖ್ಯವಾಗಿ ಇವಳ ರಕ್ಷಣೆಗಾಗಿಯೇ ನೀನು ಆಶ್ರಮದಲ್ಲಿ ಬಹಳ ಎಚ್ಚರಿಕೆಯಿಂದಿರು. ಕಾರ್ಯ ದಕ್ಷನಾದ ಜಟಾಯುವು ನಿನಗೆ ನೆರವಾಗಿರುತ್ತಾನೆ. ಪ್ರತಿನಿಮಿಷದಲ್ಲಿ ಎಲ್ಲಿಂದ ಯಾವ ಭಯ ಸಂಭವಿಸುವುದೋ ಎಂದು ಶಂಕಿಸುತ್ತ ಮೈಥಿಲಿಯನ್ನು ಜೋಪಾನವಾಗಿ ನೋಡಿಕೊಳ್ಳುತ್ತಿರು' ಎಂದು ಹೇಳಿ ಮಾಯಾಮೃಗವನ್ನು ಹಿಡಿಯಲು ಹೊರಟನು.

ಮಾರೀಚನು ಶ್ರೀರಾಮನನ್ನು ವಂಚಿಸಿ ಬಹುದೂರ ಕರೆದುಕೊಂಡು ಹೋದದ್ದನ್ನು ನೋಡಿ ಕೋಪ ಬಂದು ರಾಮಬಾಣಬಿಟ್ಟ. ಆಗ ಪ್ರಾಣಬಿಡುತ್ತಿದ್ದ ಮಾರೀಚ 'ಹಾ! ಸೀತೆ! ಲಕ್ಷ್ಮಣ' ಎಂದು ಪ್ರಾಣಬಿಟ್ಟನು. ಪತಿಯ ಧ್ವನಿಯಂತೆ ಇದ್ದ ಆ ಆರ್ತಧ್ವನಿಯನ್ನು ಕೇಳಿ ತಲ್ಲಣಿಸುತ್ತಾ ಲಕ್ಷ್ಮಣನನ್ನು ಕುರಿತು ಹೀಗೆಂದಳು. 'ಹೋಗು ರಾಮನ ಸಮಾಚಾರವೇನೆಂಬುದನ್ನು ತಿಳಿದುಕೋ. ನನ್ನ ಹೃದಯವು ಪ್ರಾಣವೂ ಸ್ವಸ್ಥಾನದಲ್ಲಿ ನಿಲ್ಲುತ್ತಿಲ್ಲ. ಬಹಳ ದೈನ್ಯದಿಂದ ಕೂಗಿಕೊಂಡ ಶಬ್ಧವು ನನಗೆ ಚೆನ್ನಾಗಿ ಕೇಳಿಬಂತು ಕಾಡಿನಲ್ಲಿ ಕೂಗಿಕೊಳ್ಳುತ್ತಿರುವ ಅಣ್ಣನನ್ನು ಕಾಪಾಡು, ರಕ್ಷಕನನ್ನು ಕೋರುತ್ತ ಸಿಂಹಗಳ ವಶಕ್ಕೆ

ಉತ್ತಮವಾದ ಎತ್ತು ಸಿಕ್ಕಿದಂತೆ ರಾಕ್ಷಸರ ವಶಕ್ಕೆ ಸಿಕ್ಕಿರುವ ಅಣ್ಣನ ಬಳಿಗೆ ನೀನು ಓಡಿಹೋಗು'[೧] ಎಂದಳು.

ಈಕೆಯ ತಳಮಳಗೊಂಡ ಮಾತುಗಳನ್ನು ಕೇಳಿಯೂ ಅಚಲವಾಗಿ ನಿಂತಿದ್ದ ಲಕ್ಷ್ಮಣನನ್ನು ಕಂಡು ಸೀತೆಗೆ ಕೋಪ ಬಂದು, 'ಲಕ್ಷ್ಮಣಾ, ಅಣ್ಣನ ಈ ಸ್ಥಿತಿಯಲ್ಲಿ ಆತನ ಬಳಿಗೆ ಹೋಗದಿರುವುದರಿಂದ ನೀನು ಅಣ್ಣನಿಗೆ ಮಿತ್ರರೂಪದಲ್ಲಿರುವ ಶತ್ರುವಿನಂತಿರುವೆ. ಲಕ್ಷ್ಮಣಾ, ನೀನು ನನಗಾಗಿ ರಾಮನು ಹೋಗಿಬಿಡಬೇಕೆಂದಿರುವೆ. ನನ್ನ ಮೇಲಣ ಆಸೆಯಿಂದ ನೀನು ರಾಮನನ್ನುಸರಿಸಿ ಹೋಗುತ್ತಿಲ್ಲ. ಇದು ನಿಶ್ಚಯ. ನಿನಗೆ ಆತನ ಕಷ್ಟಸ್ಥಿತಿಯು ಇಷ್ಟವಾಗಿದೆಯೆಂದು ಕಾಣುತ್ತದೆ. ಅಣ್ಣನಲ್ಲಿ ನಿನಗೆ ವಿಶ್ವಾಸವಿಲ್ಲ. ಆದುದರಿಂದ ನೀನು ಆ ಮಹಾಜ್ಯೋತಿಯನ್ನು ಕಾಣದಿದ್ದರೂ ನಿಶ್ಚಿಂತನಾಗಿ ನಿಂತಿರುವೆ. ಯಾರನ್ನು ಮುಂದಿಟ್ಟುಕೊಂಡು ಬಂದೆಯೋ ನೀನು ಆತನಿಗೆ ಸಂಶಯವುಂಟಾಗಿರುವಾಗ ನನ್ನಿಂದಿಲ್ಲಿ ಏನಾಗಬೇಕು?[೨] ನೀನಿಲ್ಲಿ ನಿಂತು ಮಾಡುವುದೇನು? ಎಂದು ಹಲುಬಿದಳು. ಲಕ್ಷ್ಮಣನು ತಾಯಿರೂಪಿನ ಅತ್ತಿಗೆಗೆ 'ನಿನ್ನ ಪತಿಯನ್ನು ಜಯಿಸಬಲ್ಲವರು ಸರ್ಪಗಳಲ್ಲಿಯೂ ಅಸುರಗಂಧರ್ವದೇವ ಮನುಷ್ಯ ರಾಕ್ಷಸರಲ್ಲಿಯೂ ಯಾರು ಇಲ್ಲ. ನೀನು ಹೀಗೆ ಹೇಳಬಾರದು. ರಾಮನಿಲ್ಲದಿರುವಾಗ ಈ ಅರಣ್ಯದಲ್ಲಿ ನಿನ್ನೊಬ್ಬಳನ್ನೆ ಬಿಟ್ಟು ಹೋಗಲಾರೆ' ಎನ್ನುತ್ತಾನೆ. ಸೀತೆಯ ಕಣ್ಣುಗಳು ಕೆಂಪಾದವು. ಕಠೋರ ನುಡಿಗಿಡಿಗಳು ಸ್ಫುರಿಸಿದವು. 'ಕ್ರೂರಿ, ಕುಲಗೇಡಿ, ರಾಮನಿಗೆ ಒದಗಿರುವ ದೊಡ್ಡ ಕಷ್ಟವು ನಿನಗೆ ಪ್ರಿಯವೆಂದು ಕಾಣುತ್ತದೆ. ನನಗೋಸ್ಕರ ಕಪಟತನದಿಂದ ಬಂದಿದ್ದೀಯೆ ಅಥವಾ ಭರತನೇ ನಿನ್ನನ್ನು ಕಳುಹಿಸಿದ್ದಾನೋ ಏನೋ ಆದರೆ ಲಕ್ಷ್ಮಣ ನಿನ್ನ ಉದ್ದೇಶವು ನಡೆಯದು. ಭರತನದೂ ನಡೆಯದು ನಿನ್ನೆದುರಿಗೇ ಪ್ರಾಣವನ್ನು ಬಿಡುವುದು ನಿಶ್ಚಯ. ಲಕ್ಷ್ಮಣ ಶ್ರೀರಾಮನನ್ನು ಬಿಟ್ಟು ಇನ್ನೊಬ್ಬ ಗಂಡಸನ್ನು ಎಡಗಾಲಿನಿಂದ ಮುಟ್ಟಲಾರೆ' ಎಂದು ತಾನು ರಾಮನಿಲ್ಲದಿದ್ದರೆ ಸಾಯುವುದಾಗಿ ತಿಳಿಸುತ್ತಾಳೆ. ಅತ್ತಿಗೆಯ ಸಂಕಟವನ್ನು ಕಂಡು ಅವಳ ಮಾತಿನಿಂದ ನೊಂದು ರಾಮನ ಬಳಿಗೆ ತೆರಳಿದನು.

ಸೀತೆ ಅವಶ್ಯಕ ಎಂದು ತೋರಿದಾಗ ಯಾವ ಮಾತನಾದರೂ ಆಡುವುದಕ್ಕೆ ಹಿಂಜರಿಯುವುದಿಲ್ಲ ಎಂಬುದಕ್ಕೆ ಈ ಸಂದರ್ಭ ಮತ್ತು ಹಿಂದೆ ರಾಮನೊಡನೆ ಆಡಿದ ಸಂದರ್ಭಗಳು ಸಾಕ್ಷಿಯಾಗುತ್ತವೆ. ತನ್ನನ್ನು ಬೆಂಕಿಗೆ ಹೋಗುವುದಕ್ಕೆ ರಾಮ ಅಪ್ಪಣೆ ನೀಡಿದಾಗ ಮಾತನಾಡದೆ ಅಗ್ನಿಪ್ರವೇಶ ಮಾಡುವ ಸೀತೆ ಅಯೋಧ್ಯೆಯಲ್ಲಿರು ಎಂದು ರಾಮ ಹೇಳಿದಾಗ ಇಂಥದ್ದೆ ಕಠೋರ ನುಡಿಗಳನ್ನು ಆಡಿ ಕಾರ್ಯ ಸಾಧಿಸಿಕೊಂಡಿರುತ್ತಾಳೆ. ಇದೇ ಕಠೋರ ನುಡಿಯ ಬಾಣ ಪ್ರಯೋಗವನ್ನು ಮಾಡಿ ಲಕ್ಷ್ಮಣನನ್ನು ಹೋಗುವಂತೆ ಮಾಡುತ್ತಾಳೆ. ಇಂಥ ಸನ್ನಿವೇಶದಲ್ಲಿ ಸೀತೆಗೆ ಈ ರೀತಿಯ ಕಠೋರ ನುಡಿಗಳನ್ನು ಆಡದೆ ಬೇರೆ ದಾರಿಯಿರಲಿಲ್ಲ. ಶ್ರೀರಾಮನು ರಾಕ್ಷಸರ ಮಾಯೆಯಿರಬಹುದೆಂದು ಸಂದೇಹವನ್ನುಂಟು ಮಾಡಿದ್ದ ಮೃಗವನ್ನು ಬೆನ್ನಟ್ಟಿ ಹೋಗಿದ್ದನು. ಲಕ್ಷ್ಮಣನಿಗೆ ಅದು ರಾಕ್ಷಸರ ಮಾಯೆ ಎಂಬುದರಲ್ಲಿ ಸಂದೇಹವಿರಲಿಲ್ಲ. ಸೀತೆಯ ಆಸೆಯನ್ನು ಈಡೇರಿಸಲು ಹೋದ ರಾಮನಿಗೆ ಏನಾಗುತ್ತದೋ ಎಂಬ ಕಾತುರದಲ್ಲಿ

---

[೧] ಅದೇ, ಸರ್ಗ ೪೫.

[೨] ಅದೇ

ನಿಂತಿದ್ದಾನೆ. ಪತಿ ಹಿಂಬಾಲಿಸಿಕೊಂಡು ಹೋಗಿರುವುದು ರಾಕ್ಷಸನೋ ಮೃಗವೋ ಎಂಬ ಶಂಕೆ ಈಕೆಗೂ ಇದೆ. ಇಂಥ ಸಂದರ್ಭದಲ್ಲಿ 'ಸೀತೆ' 'ಲಕ್ಷ್ಮಣ' ಎಂದು ರಾಮನ ದನಿಯಲ್ಲಿ ಕೂಗಿದರೆ ಕೇಳಿದ ಆ ಹೆಣ್ಣು ಹೃದಯಕ್ಕೆ ಏನಾಗಬಹುದು. ರಾಕ್ಷಸನು ಹೀಗೆ ಕೂಗಿದಾಗ ರಾಮನೇ ಈ ಕೂಗನ್ನು ಕೇಳಿದರೆ ಸೀತೆಯ ಸ್ಥಿತಿ ಏನಾಗಬಹುದು ಎಂದು ಚಿಂತಿಸಿದ್ದನು. ಕೂಗಿದ್ದು ರಾಮನಲ್ಲ ಎಂದು ಅನ್ನಿಸಿದರೂ ಒಂದು ವೇಳೆ ರಾಮನೇ ಆಗಿದ್ದರೆ ಎಂಬ ಭಯ ಅವಳನ್ನು ಮುತ್ತಿದೆ. ಅದಕ್ಕಾಗಿಯೇ ಅವಳು ಮಾತಿನ ಛಾಟಿ ಏಟನ್ನು ಲಕ್ಷ್ಮಣನಿಗೆ ಕೊಡುತ್ತಾಳೆ. ಸೀತೆ ಲಕ್ಷ್ಮಣನನ್ನು ಕುರಿತು ಇಂಥ ಮಾತುಗಳನ್ನು ಹೇಳಿದರು ಅವನ ವಿಷಯದಲ್ಲಿ ಸ್ವಲ್ಪವಾದರೂ ಅನುಮಾನವಿರಲಿಲ್ಲ.

ಲಕ್ಷ್ಮಣನು ಅತ್ತ ಹೋದೊಡನೆ ಇತ್ತ ಸನ್ಯಾಸಿಯ ವೇಷವನ್ನು ತಾಳಿ ಬಂದ ರಾವಣನನ್ನು ಬ್ರಾಹ್ಮಣೋತ್ತಮನೆಂದು ತಿಳಿದು ಅತಿಥಿ ಸತ್ಕಾರಗಳಿಂದ ಗೌರವಿಸಿದಳು. ಆತ ರಾಕ್ಷಸನೆಂದು ಅರಿಯದೆ ಸೀತೆ ತನ್ನೆಲ್ಲ ವೃತ್ತಾಂತವನ್ನು ತಿಳಿಸುತ್ತಾಳೆ. ಆಗ ರಾವಣನು ತಾನು ಲಂಕೆಯ ಅಧಿಪತಿ ರಾವಣನೆಂದು ಹೇಳಿ 'ನೀನು ನನ್ನ ಭಾರ್ಯೆಯಾಗುವುದಾದರೆ ಸರ್ವಾಭರಣಗಳಿಂದ ಅಲಂಕೃತರಾದ ಐದು ಸಾವಿರ ದಾಸಿಯರು ನಿನಗೆ ಸೇವೆ ಮಾಡುವರು' ಎನ್ನುತ್ತಾನೆ. ರಾವಣನು ಹೀಗೆ ನುಡಿಯುತ್ತಿರಲು ಸೀತಾದೇವಿಯು ಬಹುಕೋಪದಿಂದ ಅವನನ್ನು ತಿರಸ್ಕರಿಸುವಳು 'ಮಹಾಗಿರಿಯಂತೆ ಅಲ್ಲಾಡಿಸಲಾಗದವನೂ ದೇವೇಂದ್ರನಿಗೆ ಸಮಾನನೂ ದೊಡ್ಡ ಕಡಲಿನಂತೆ ಕ್ಷಮಿಸಿದವನೂ ಆದ ನನ್ನ ಪತಿ ರಾಮನನ್ನು ಅನುಸರಿಸಿ ನಡೆಯುವ ವ್ರತವುಳ್ಳವಳು ನಾನು' ಎಂದು ತಿರಸ್ಕರಿಸುವಳು. ಕಟು ಮಾತುಗಳಿಂದ ಸೀತೆ ನಿಂದಿಸುತ್ತಾ ಪ್ರತಿಭಟಿಸುತ್ತಿದ್ದಂತೆಯೇ ಬಲತ್ಕಾರದಿಂದ ಅವಳನ್ನು ಎಳೆದು ವಿಮಾನದೊಳಗೆ ಕುಳ್ಳಿರಿಸಿದನು. ಲಕ್ಷ್ಮಣನು ಹೆಸರು ಕರೆದು ಪ್ರಲಾಪಿಸಿದಳು. ರಾಮನಾಮ ಹಿಡಿದು ಕೂಗಿದಳು. ಅಪಹರಣದ ಸಂದರ್ಭದಲ್ಲಿ ಎಚ್ಚರಗೊಂಡ ಜಟಾಯು ರಾವಣನೊಡನೆ ಘೋರವಾಗಿ ಹೋರಾಟ ನಡೆಸಿದರೂ ಪ್ರಯೋಜನವಾಗಲಿಲ್ಲ. ಸಕಲ ಗಿರಿದೇವತೆಗಳು, ಜಲದೇವತೆಗಳು, ವನದೇವತೆಗಳನ್ನು ಪ್ರಾರ್ಥಿಸಿ ರಾವಣನು ತನ್ನನ್ನು ಅಪಹರಿಸಿದ ಸುದ್ದಿಯನ್ನು ರಾಮನಿಗೆ ತಿಳಿಸುವಂತೆ ಬೇಡುತ್ತಾಳೆ. 'ಯಾವ ಯಾವ ಪ್ರಾಣಿಗಳು ವಾಸಿಸುತ್ತಿವೆಯೋ ಅವುಗಳೆಲ್ಲಕ್ಕೂ ಮೃಗಪಕ್ಷಿಗಳ ತಂಡಕ್ಕೂ ಸಹ ನಾನು ಶರಣ ಹೋಗುವೆನು. ನನ್ನ ಪತಿಗೆ ಪ್ರಿಯಳೂ ಪ್ರಾಣಗಳಿಗಿಂತಲೂ ಹೆಚ್ಚಾದವಳೂ ಆದ ಸೀತೆಯು ಪರಾಧೀನಳಾಗಿ ರಾವಣನಿಂದ ಕೊಂಡೊಯ್ಯಲ್ಪಟ್ಟಳೆಂದು ಆತನಿಗೆ ತಿಳಿಸಿರಿ' ಎಂದು ಆರ್ತಳಾಗಿ ಬೇಡುತ್ತಾಳೆ. ರಾವಣನನ್ನು ಎಷ್ಟೇ ನಿಂದಿಸಿದರು ಪ್ರಯೋಜನವಾಗಲಿಲ್ಲ. ವಾನರ ಶ್ರೇಷ್ಠರನ್ನು ಕಂಡು ಇವರಾದರು ತಾನು ಅಪಹರಣಗೊಂಡ ವಿಷಯವನ್ನು ರಾಮನಿಗೆ ಹೇಳಬಹುದೆಂದು ಚಿನ್ನದ ಕಾಂತಿಯುಳ್ಳ ತನ್ನ ರೇಷ್ಮೆಯ ಮೇಲು ಹೊದಿಕೆಯನ್ನು ತೆಗೆದು ಅದರ ನಡುವೆ ಮಂಗಳಕರವಾದ ಆಭರಣಗಳನ್ನು ಗಂಟುಕಟ್ಟಿ ಅದನ್ನು ಅವರ ನಡುವೆ ಎಸೆದಳು. ರಾವಣನು ಜಾನಕಿಯನ್ನು ನಾನಾ ವಿಧದಲ್ಲಿ ಕೇಳಿ ತನ್ನವಳನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸಿದನು. ಆಕೆಯು ಅವನ ಪ್ರಲೋಭನೆಗಳನ್ನು ನಿರಾಕರಿಸಿದ್ದರಿಂದ ಸೀತೆಯನ್ನು ಅಶೋಕವನಕ್ಕೆ ತಂದಿಟ್ಟು ರಾಕ್ಷಸಿಯರ ಕಾವಲು ಹಾಕಿದನು. 'ಎಲೆ ಸೀತೆ, ಮೃದುನಗೆಯವಳೇ, ನನ್ನ ಮಾತನ್ನು ಕೇಳು, ಇಂದಿನಿಂದ ಹನ್ನೆರಡು ತಿಂಗಳುಗಳೊಳಗೆ ನನ್ನನ್ನು ಹೊಂದದೆ ಇದ್ದ

ಪಕ್ಷದಲ್ಲಿ ಬಳಿಕ ನಿನ್ನನ್ನು ಅಡುಗೆಯವರು ಬೆಳಗಿನ ತಿಂಡಿಗಾಗಿ ಚೂರುಚೂರಾಗಿ ಕತ್ತರಿಸಿಬಿಡವರು' ಎಂದು ಎಚ್ಚರಿಕೆ ನೀಡಿದನು.

**ಸುಂದರಕಾಂಡ**

ರಾಮನ ಆಣತಿಯಂತೆ ಲಂಕೆಗೆ ಬಂದ ಹನುಮಂತನು ಎಲ್ಲ ಕಡೆ ಹುಡುಕಿದರು ಸೀತೆಯನ್ನು ಕಾಣದೆ ನಿರಾಶೆಯನ್ನು ಹೊಂದಿ ಅಶೋಕವನಕ್ಕೆ ಬಂದನು. ದುಃಖಸಂತಪ್ತಳದ ತಪಸ್ವಿನಿಯೊಬ್ಬಳನ್ನು ಕಂಡು 'ಅಂದು ಕಾಮರೂಪಿಯಾದ ರಾಕ್ಷಸನು ಕೊಂಡೊಯ್ಯುತ್ತಿದ್ದಾಗ ಯಾವ ರೂಪವನ್ನು ನಾವು ಕಂಡೆವೋ ಆ ಅಂಗನೆಯು ಅದೇ ರೂಪವನ್ನು ಪಡೆದಿರುವಳು' ಎಂದು ತರ್ಕಿಸಿದನು. ಸುಂದರವೂ ಶಾಂತವೂ ಆದ ಅಶೋಕವನದಲ್ಲಿ ಸೀತೆ ರಾಮನಾಮವನ್ನು ಪಟಿಸುತ್ತಾ ಶೋಕಿಸುತ್ತಿದ್ದಾಳೆ. ಕ್ರೂರ ರಾಕ್ಷಸಿಯರು ಕಾವಲು ಕಾಯುತ್ತಿದ್ದಾರೆ. ತನ್ನ ವೀರ ಪಾತಿವ್ರತ್ಯ ತಪೋಪ್ರಭೆಯಿಂದ ಸಮಸ್ತ ದಿಕ್ಕುಗಳನ್ನು ಬೆಳಗುತ್ತಿದ್ದಳು. ಇವಳ ಮನಸ್ಸು ರಾಮನಲ್ಲಿಯೆ ನೆಲೆಸಿದ ಅಶೋಕವನವೆಲ್ಲಾ ರಾಮಮಯವಾಗಿದೆ. ರಾಮನನ್ನು ಮತ್ತೆ ಸೇರುವೆನೆಂಬ ನಿರೀಕ್ಷೆಯಲ್ಲಿದ್ದಾಳೆ. ಶೀಲವೊಂದೇ ಅವಳ ರಕ್ಷೆಯಾಗಿದೆ. ಕಾಮಪೀಡಿತನಾದ ರಾವಣನು ಸೀತೆಯೆಡೆಗೆ ಬಂದಾಗ ಆಕೆ ಮನಸ್ಸೆಂಬ ರಥಕ್ಕೆ ಸಂಕಲ್ಪಗಳೆಂಬ ಕುದುರೆಗಳನ್ನು ಕಟ್ಟಿ ರಾಮನ ಬಳಿಗೆ ವೇಗವಾಗಿ ಹೋಗುತ್ತಿದ್ದಳು. ಕಾಮಾತುರನು ದೈನ್ಯದಿಂದಲೂ ಅನೇಕ ಆಮಿಷಗಳಿಂದಲೂ ಪಾತಿವ್ರತ್ಯಮೂರ್ತಿ ತನ್ನ ಮೃತ್ಯುಮೂರ್ತಿಯನ್ನು ಪ್ರಾರ್ಥಿಸಿಕೊಂಡನು 'ನಿನ್ನನ್ನು ಬಲತ್ಕಾರವಾಗಿ ತಂದಿದ್ದರೂ ಕೂಡ ನೀನು ಬಯಸದೆ ಬಲಾತ್ಕಾರವಾಗಿ ನಿನ್ನನ್ನು ನಾನು ಮುಟ್ಟುವುದಿಲ್ಲ' ಎಂದನು.

ದುಷ್ಟನಾದ ಆ ರಾಕ್ಷಸನ ಮಾತನ್ನು ಕೇಳಿ ದುಃಖಿತಳಾದ ಸೀತೆಯು ಮೆಲ್ಲನೆ ದೈನ್ಯ ಧ್ವನಿಯಿಂದ ಪ್ರತ್ಯುತ್ತರ ಕೊಡುತ್ತಾಳೆ. ತಪಸ್ವಿನಿಯೂ ಉತ್ತಮ ಸ್ತ್ರೀಯೂ ಪತಿವ್ರತೆಯೂ ಆದ ಸೀತೆಯು ಪತಿಯನ್ನೇ ಧ್ಯಾನಿಸುತ್ತ ದುಃಖಾರ್ತಳಾಗಿ ಅಳುತ್ತ ನಡುಗುತ್ತ ಒಂದು ಹುಲ್ಲು ಕಡ್ಡಿಯನ್ನು ನಡುವೆ ಇಟ್ಟ ಶುದ್ಧವಾದ ಮುಗುಳು ನಗೆಯಿಂದ ದಿಟ್ಟಳಾಗಿ ಉತ್ತರ ಕೊಟ್ಟಳು. 'ಸ್ತ್ರೀಯರ ಪಾತಿವ್ರತ್ಯವನ್ನು ಕಾಪಾಡುವ ಪುರುಷನೇ ಈ ರೀತಿ ಮಾಡಬಾರದು. ನಿನ್ನೊಬ್ಬನ ತಪ್ಪಿನಿಂದ ನೀನು ನಿನ್ನ ಲಂಕಾ ನಗರವೂ ರಾಮಬಾಣಗಳಿಂದ ನಾಶವಾಗುವುದು ಖಂಡಿತ. ಸೂರ್ಯನಿಂದ ಅವನ ಪ್ರಭೆಯನ್ನು ಪ್ರತ್ಯೇಕ ಮಾಡುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ತ್ರಿಲೋಕ ವೀರನಾದ ನನ್ನ ಗಂಡನು ಶರಣಾಗತ ವತ್ಸಲ ನನ್ನನು ಅವನಿಗೊಪ್ಪಿಸಿ ಶರಣಾಗಿ ಇನ್ನೂ ಕೆಲವು ಕಾಲ ಬದುಕು ನನ್ನ ಮಾತುಗಳು ನಿನಗೆ ಅರ್ಥವಾಗುವುದಿಲ್ಲ. ನಿನ್ನ ಈ ಅತಿರೇಕದ ಕಾಮಾಸಕ್ತಿಯನ್ನು ಪರಿವರ್ತಿಸಿ ಬ್ರಹ್ಮನನ್ನು ಕುರಿತು ತಪಸ್ಸಾನ್ನಚರಿಸಿದರೆ ನನಗಿಂತಲೂ ನೂರ್ಮಡಿಯಾದ ಸುಂದರಿಯನ್ನು ಸೃಷ್ಟಿಸಿಕೊಡುವನು. ನನ್ನನ್ನು ರಾಮನ ಬಳಿಗೆ ತಲುಪಿಸು ಎಂದಳು. ಆಗ ರಾವಣನು ಇನ್ನೂ ಎರಡು ತಿಂಗಳು ವಾಯಿದೆಯನ್ನು ಕೊಟ್ಟು ಸೀತೆ ತನ್ನ ಹಾಸಿಗೆಯನ್ನು ಏರದಿದ್ದರೆ ಬೆಳಗಿನ ಊಟಕ್ಕೆ ಆಹಾರವಾಗಿ ಕತ್ತರಿಸಿ ಹಾಕುವೆ ಎಂದು ಬೆದರಿಕೆಯನ್ನು ಹಾಕಿದನು. ಸೀತೆ ತನ್ನ ಪಾತಿವ್ರತ್ಯದ ಬಲದಿಂದ ದಿಟ್ಟವಾಗಿ ಪ್ರತ್ಯುತ್ತರ ನೀಡಿದಳು.

'ರಾವಣ ನಿಜವಾಗಿಯೂ ಇಲ್ಲಿ ನಿನ್ನ ಶ್ರೇಯಸ್ಸನ್ನು ಬಯಸಿ ಹಿತೋಪದೇಶ ಮಾಡತಕ್ಕವರು ಇಲ್ಲವೆಂದೇ ತೋರುತ್ತಿದೆ. ಇಂತಹ ಹೀನಕೃತ್ಯಕ್ಕೆಳಿಸಿರುವ ನಿನ್ನನ್ನು ತಡೆಯತಕ್ಕವರು ಇಲ್ಲವೆ. ಇಂದ್ರನಿಗೆ ಶಚಿಯಂತೆ ಧರ್ಮಾತ್ಮನಾದ ರಾಮನಿಗೆ ಪತ್ನಿಯಾದ ನನ್ನನ್ನು ಮನಸ್ಸಿನಲ್ಲಾದರೂ ಬಯಸುವವನು ಈ ಜಗತ್ತಿನಲ್ಲಿ ನಿನ್ನನ್ನು ಬಿಟ್ಟರೆ ಇನ್ನಿಲ್ಲ. ಅಧಮ! ಮಹಾತೇಜಸ್ವಿಯಾದ ಶ್ರೀರಾಮನ ಪತ್ನಿಗೆ ಇಂತಹ ತುಚ್ಛವಾದ ಮಾತನ್ನಾಡಿದೆಯೇ? ನನ್ನ ತೇಜಸ್ಸಿನಿಂದಲೇ ನಿನ್ನನ್ನು ಸುಟ್ಟು ಬೂದಿ ಮಾಡಬಲ್ಲೆನು. ಆದರೆ ಶ್ರೀರಾಮನು ಅನುಮತಿ ಕೊಟ್ಟಿಲ್ಲವೆಂದು ತಪೋಶಕ್ತಿಯು ವ್ಯರ್ಥವಾಗುವುದೆಂದು ಸುಮ್ಮನಿದ್ದೇನೆ. ಧೀಮಂತನಾದ ರಾಮನನ್ನು ವಂಚಿಸಿ ನನ್ನನ್ನು ಅಪಹರಿಸಲು ನಿನಗೆ ಶಕ್ತಿ ಎಲ್ಲಿಂದ ಬಂದಿತು. ನಿನ್ನ ವಧೆಗೋಸ್ಕರ ದೈವವೇ ಗೊತ್ತುಪಡಿಸಿದ ಒಂದು ಏರ್ಪಾಡಿದು. ಆ ಸಂಕಲ್ಪವೂ ನನ್ನ ಸಂಕಲ್ಪವೂ ಒಂದೇ ಎಂದರಿತು ಕರ್ತವ್ಯ ದೃಷ್ಟಿಯಿಂದ ಸಹಧರ್ಮಚಾರಿಣಿಯಾಗಿ ನಿನ್ನ ವಶವಾಗಿದ್ದೇನೆ. ಎಚ್ಚರಿಕೆ ಎಚ್ಚರಿಕೆ' ಎಂದು ಆರ್ಭಟಿಸಿದಳು.

ಕೆರಳಿದ ರಾವಣನನ್ನು ಈತನ ಹೆಂಡತಿ ಧ್ಯಾನಮಾಲಿನಿ ಕರೆದುಕೊಂಡು ಹೋದಳು. ಕಾವಲು ರಾಕ್ಷಸಿಯರಿಗೆ ನಯಬಯಗಳಿಂದಲೂ ಸಮಾಧಾನ, ದಂಡಗಳಿಂದಲಾದರೂ ಸೀತೆಯನ್ನು ವಶಪಡಿಸಿಕೊಳ್ಳಿ ಎಂದು ಹೇಳಿ ಹೊರಟನು.

ವಿಕಾರ ರೂಪಿನ ಕಾವಲು ರಾಕ್ಷಸಿಯರು ಕಿರುಕುಳ ಕೊಡುತ್ತಾ ಕಣ್ಣಿಟ್ಟು ಕಾದಿರುವುದರಿಂದ ಇಷ್ಟ ಬಂದಂತೆ ಪ್ರಾಣ ಬಿಡಲೂ ಅವಕಾಶವಿಲ್ಲದ ಈ ಮನುಷ್ಯ ಜನ್ಮಕ್ಕೆ ದಿಕ್ಕರ ಇರಲಿ. ಈ ಪರಾಧೀನತೆಗೆ ದಿಕ್ಕಾರವಿರಲಿ ಎಂದು ಗೋಳಾಡಿ ಶ್ರೀರಾಮನು ಇಷ್ಟು ದಿನಗಳಾದರೂ ತನ್ನನ್ನು ಬಿಡಿಸಿಕೊಂಡು ಹೋಗಲು ಬರದಿರುವುದಕ್ಕೆ ಕಾರಣವೇನೆಂದು ಚಿಂತಿಸತೊಡಗಿದಳು. ತನ್ನ ದುರ್ವಿಧಿಯನ್ನು ನೆನೆ ನೆನೆದು ದುಃಖಿಸುತ್ತಿದ್ದಳು. ಈ ಅಲ್ಪ ಶಕ್ತಿಯ ರಾಕ್ಷಸನನ್ನು ಸಂಹಾರ ಮಾಡಲು ನನ್ನ ಗಂಡನೂ ನಿಶ್ಚಯವಾಗಿಯೂ ಬರುವನು. ನಾನಿರುವ ಸ್ಥಳ ಗೊತ್ತಿಲ್ಲದಿರಬಹುದು. ನನ್ನ ವಿರಹದ ದುಃಖದಿಂದ ದೇಹತ್ಯಾಗ ಮಾಡಿರಬಹುದು. ಧರ್ಮಜ್ಞನಾಗಿರುವುದರಿಂದ ರಾಜರ್ಷಿಯಾಗಿರಬಹುದು. ಶ್ರೀರಾಮ ಕೃತಘ್ನನಲ್ಲ. ರಾವಣನು ವಂಚನೆಯಿಂದ ಅವನನ್ನು ಕೊಂದಿರಬಹುದೆ? ಚಕ್ರವ್ಯೂಹದಂಥ ಕಷ್ಟಗಳಲ್ಲಿ ಸಿಕ್ಕಿಕೊಂಡಿರುವೆನೋ ಅಂತು ನಾನು ನಿಶ್ಚಯವಾಗಿಯೂ ಪ್ರಾಣವನ್ನು ಬಿಡುವೆನು ಎಂದು ರೋಧಿಸುತ್ತಿದ್ದ ಜಾನಕಿಯನ್ನು ವೃಧ್ಧರಾಕ್ಷಸಿ ತ್ರಿಜಟೆ ತಾನು ಕಂಡ ಸ್ವಪ್ನವನ್ನು ಹೇಳಿ ಸಮಾಧಾನಗೊಳಿಸಿದಳು.

ರಾವಣನು ಕೊಟ್ಟಿದ್ದ ಅವಧಿ ಸಮೀಪಿಸುತ್ತಾ ಬಂದಿತು. ಶ್ರೀರಾಮ ಲಕ್ಷ್ಮಣರ ಆಗಮನದ ಸುದ್ದಿಯೇ ಇಲ್ಲ, ಮೂಢೆಯಾದ ನಾನು ರಾಮನನ್ನು ಕಳುಹಿಸಿದನಲ್ಲದೇ ಲಕ್ಷ್ಮಣನನ್ನು ಕಳುಹಿಸಿಬಿಟ್ಟು ತಪ್ಪು ಮಾಡಿದೆನು. ನಾನು ಆಚರಿಸಿದ ಧರ್ಮವೂ ಪಾತಿವ್ರತ್ಯವೂ ಫಲವನ್ನು ಕೊಡಲಿಲ್ಲ. ನೀನು ಪಿತೃವಾಕ್ಯವನ್ನು ಪರಿಪಾಲಿಸಿ ಅರಣ್ಯವಾಸದಿಂದ ಹಿಂದಿರುಗಿ, ಸುಂದರಿಯಾದ ಸ್ತ್ರೀಯರೊಡನೆ ವಿಹರಿಸಬಹುದು. ನಾನಾದರೊ ನಿನ್ನಲ್ಲಿಯೇ ಅನುರಾಗವನ್ನಿಟ್ಟು ನಿಯಮವನ್ನು ಆಚರಿಸಿ ಪ್ರಾಣವನ್ನು ಬಿಡುತ್ತಿದ್ದೇನೆ. ಅವಳು ನಾನಾ ವಿಧದಲ್ಲಿ ಚಿಂತಿಸಿ ಕಡೆಗೆ

ತನ್ನ ನೀಳವಾದ ವೇಣಿಯನ್ನು ಕೈಯಲ್ಲಿ ಹಿಡಿದು ಇದರಿಂದ ನೇಣು ಹಾಕಿಕೊಂಡು ಶೀಘ್ರದಲ್ಲಿಯೇ ರಾಮನ ಬಳಿಗೆ ಹೋಗುವೆನು ಎಂದು ನಿರ್ಧರಿಸಿದಳು. ಆ ಕೋಮಲಾಂಗಿಯು ಹೀಗೆ ದುಃಖಿಸುತ್ತಿದ್ದಳು. ಸೀತೆಯನ್ನು ಹುಡುಕಿಕೊಂಡು ಬಂದ ಹನುಮಂತನು ದುಃಖಿಸುತ್ತಿದ್ದ ಸೀತೆಯನ್ನು ಕಂಡನು. ಸೀತೆಯನ್ನು ಮಾತನಾಡಿಸಿ, ರಾಮನು ಬರುವನೆಂದು ಧೈರ್ಯಹೇಳಿ ತೆರಳುವೆನೆಂದು ಚಿಂತಿಸಿ ಆಕೆಯ ಬಳಿಗೆ ಬಂದನು. ರಾಕ್ಷಸರ ಹಿಡಿತದಲ್ಲಿದ್ದ ಸೀತೆ ಇದು ರಾಕ್ಷಸರ ಮಾಯೆ ಎಂದು ತಿಳಿಯುವಳು ಎಂದು ಆಲೋಚಿಸಿದ ಹನುಮನು ರಾಮನ ಗುಣಗಾನ ಮಾಡುತ್ತ ಸೀತೆಗೆ ಕಾಣಿಸಿಕೊಂಡನು.

ಸ್ವಪ್ನವೋ ರಾಕ್ಷಸರ ಮಾಯೆಯೋ ಎಂದು ಅಳುಕುತ್ತಿದ್ದ ಸೀತೆಗೆ ತನ್ನ ಪರಿಚಯವನ್ನು ಮಾಡಿಕೊಂಡನು. ತಾನು ಸುಗ್ರೀವನ ಮಂತ್ರಿಯೆಂದೂ ಸುಗ್ರೀವ ರಾಮರ ಸ್ನೇಹವಾಗಿ ವಾಲಿವಧೆಯಾಗಿ ಸುಗ್ರೀವನು ಪಟ್ಟಾಭಿಷಿಕ್ತನಾಗಿರುವನೆಂದೂ ತಾನು ರಾಮದೂತನೆಂದೂ ನೀನಿರುವೆಡೆಯನ್ನು ತಿಳಿಸಿದ ಕೂಡಲೇ ಕೋಟಿ ಕೋಟಿ ವಾನರರ ಸೇನಾ ಸಮೇತ ಸಮುದ್ರವನ್ನು ಉಲ್ಲಂಘಿಸಿ ಲಂಕೆಯನ್ನು ಧ್ವಂಸಮಾಡಿ ನಿನ್ನನ್ನು ಶ್ರೀರಾಮನು ಕರೆದುಕೊಂಡು ಹೋಗುವನೆಂದೂ ಭರವಸೆಯನ್ನಿತ್ತನು. ಆದರೂ ಸೀತೆ ಇನ್ನೂ ಶಂಕಿಸಿದ್ದರಿಂದ ರಾಮಲಕ್ಷ್ಮಣರ ರೂಪಲಕ್ಷಣಗಳನ್ನು ವಾಲಿವಧೆಯನ್ನು ಸುಗ್ರೀವನ ಸಖ್ಯವನ್ನು ವಿವರವಾಗಿ ತಿಳಿಸಿದನು. ಇನ್ನೂ ನಂಬಿಕೆ ಬರುವಂತೆ ಮಾಡಲು ಶ್ರೀರಾಮನ ಹೆಸರನು ಕೆತ್ತಿರುವ ಉಂಗುರವನ್ನು ಕೊಟ್ಟನು. ಮಹಾತ್ಮನಾದ ರಾಮನು ನಿನ್ನ ನಂಬಿಕೆಗಾಗಿ ಇದನ್ನು ನನ್ನೊಡನೆ ಕೊಟ್ಟು ಕಳುಹಿಸಿರುವನು ಎಂದನು. ಅದನ್ನು ಕಂಡ ಸೀತೆ ರಾಮನನ್ನು ಪ್ರತ್ಯಕ್ಷವಾಗಿ ಕಂಡಂತೆ ಸಂತೋಷಗೊಂಡಳು. ಪತಿಯು ಹೇಳಿಕಳುಹಿಸಿದ ಕುಶಲವಾರ್ತೆಯಿಂದ ಸಂತುಷ್ಟಳಾದ ಆ ಬಾಲೆಯು ಸ್ವಲ್ಪ ನಾಚಿಕೆಯಿಂದ ಹನುಮನನ್ನು ಪ್ರಶಂಸೆ ಮಾಡತೊಡಗಿದಳು.

ಪುರುಷೋತ್ತಮನಾದ ರಾಮನು ಸುಮ್ಮನೆ ದುಃಖಪಡದೆ ಸುಮ್ಮನೆ ಪರಿತಪಿಸದೆ ಮುಂದಿನ ಕೆಲಸಗಳನ್ನು ಮಾಡುತ್ತಿರುವನೆ? ಅವನಿಗೆ ಲಕ್ಷ್ಮಣ, ಭರತ, ವಾನರರ ಸಹಕಾರ ದೊರೆಯಿತೆ ಎಂದು ಆತುರಾತುರಳಾಗಿ ಪ್ರಶ್ನಿಸಿದಳು. ರಾಮನ ವೃತ್ತಾಂತವನ್ನು ಮತ್ತೆ ಮತ್ತೆ ಕೇಳಿ ಬದುಕುವ ಆಸೆಯನ್ನು, ಚೇತನವನ್ನು ತುಂಬಿಕೊಂಡಳು. 'ಸಾಗರದಲ್ಲಿ ಒಡೆದುಹೋದ ಹಡಗು ಕಷ್ಟದಿಂದ ತೇಲಾಡುತ್ತ ಹೋಗುತ್ತ ದಡವನ್ನು ಹೇಗೋ ಮುಟ್ಟುವಂತೆ ರಾಮನು ಈ ದುಃಖದ ಆಚೆಯ ದಡವನ್ನು ಯಾವಾಗ ಸೇರುವನು? ನನ್ನ ಪತಿಯು ರಾಕ್ಷಸರನ್ನು ಸಂಹರಿಸಿ ರಾವಣನನ್ನು ಸದೆಬಡಿದು ಲಂಕೆಯನ್ನು ಬುಡಸಹಿತ ಕಿತ್ತು ಎಂದು ನನ್ನನ್ನು ನೋಡುವನು? ಈ ಒಂದು ವರ್ಷದ ಅವಧಿಯು ಮುಗಿಯುವುದರೊಳಗೆ ತ್ವರೆ ಮಾಡಬೇಕೆಂದು ಆತನಿಗೆ ಹೇಳು. ಅಲ್ಲಿಯವರೆಗೆ ತಾನೇ ನಾನು ಬದುಕಿರುವುದು ಮರುಳ ರಾವಣನು ನನಗೆ ಕೊಟ್ಟಿರುವ ಅವಧಿಯಲ್ಲಿ ಹತ್ತನೆಯ ತಿಂಗಳು ನಡೆಯುತ್ತಿದೆ. ಇನ್ನೆರಡೇ ತಿಂಗಳು ಉಳಿದಿದೆ. ನನ್ನನ್ನು ಹಿಂತಿರುಗಿ ಅರ್ಪಿಸಿಬಿಡಬೇಕೆಂಬ ವಿಭೀಷಣನ ಪ್ರಯತ್ನವನ್ನು ಅವಿಂಧ್ಯನ ಹಿತೋಪದೇಶವು ರಾವಣನಿಗೆ ಹಿಡಿಸಲಿಲ್ಲ.' ಎಂದು ದುಃಖಿಸುತ್ತಿದ್ದ ಸೀತೆಯನ್ನು ಹನುಮ ಸಮಾಧಾನಗೊಳಿಸಿದನು.

'ತಾಯಿ ನಿನ್ನನ್ನು ಈ ದುಃಖದಿಂದ ಈಗಲೇ ಪಾರು ಮಾಡುವೆನು ನನ್ನ ಬೆನ್ನ ಮೇಲಿರಿಕೋ ನಿನ್ನನ್ನು ಬೆನ್ನಿನ ಮೇಲೆ ಎತ್ತಿಕೊಂಡು ಸಮುದ್ರವನ್ನು ದಾಟುವೆನು. ನಿನ್ನನ್ನು ಕೊಂಡೊಯ್ಯುತ್ತಿರುವ ನನ್ನ ವೇಗವನ್ನು ಅನುಸರಿಸಿ ಬರಲು ಲಂಕಾ ನಿವಾಸಿಗಳಿಗೆ ಯಾರಿಗೂ ಶಕ್ಯವಲ್ಲ. ನಾನು ಇಲ್ಲಿಗೆ ಹೇಗೆ ಬಂದೆನೋ ಹಾಗೆಯೇ ನಿನ್ನನ್ನು ಎತ್ತಿಕೊಂಡು ಅಂತರಿಕ್ಷ ಮಾರ್ಗದಲ್ಲಿ ಹೋಗುವೆನು ಇದರಲ್ಲಿ ಸಂಶಯವಿಲ್ಲ' ಎಂದು ಹೇಳಿ ಅನುಮಾನಿಸುತ್ತಿದ್ದ ಸೀತೆಯ ಮುಂದೆ ಬೃಹದ್ರೂಪು ತಾಳಿದನು. ಸೀತೆಯು 'ನಿನ್ನ ಪರಾಕ್ರಮಗಳನ್ನು ವಾಯುವಿಗೆ ಸಮಾನವಾದ ನಿನ್ನ ವೇಗವನ್ನೂ ಅಗ್ನಿಗಿರುವಂತಹ ನಿನ್ನ ಅದ್ಭುತ ತೇಜಸ್ಸನ್ನು ಈಗ ತಿಳಿದುಕೊಂಡನು. ಆದರೆ ನಿನ್ನೊಡನೆ ನಾನು ಬರಲಾರೆ ನೀನು ರಾಕ್ಷಸರನ್ನೆಲ್ಲಾ ಕೊಂದರೆ ಶ್ರೀರಾಮನ ಕೀರ್ತಿಗೆ, ಅವನ ಕಾರ್ಯಸಿದ್ಧಿಗೆ ಕೊರತೆಯಾಗುತ್ತದೆಯಲ್ಲವೆ? ಪತಿಭಕ್ತಿಯನ್ನು ಗೌರವಿಸುತ್ತಾ ರಾಮನ ಹೊರತು ಬೇರೊಬ್ಬ ಗಂಡಸಿನ ಶರೀರವನ್ನು ಮುಟ್ಟಲೊಲ್ಲೆನು. ರಾಮನು ಇಲ್ಲಿಗೆ ಬಂದು ರಾವಣನನ್ನು ಬಂಧು ಸಮೇತ ಕೊಂದು ಹಾಕಿ ನನ್ನನ್ನು ಇಲ್ಲಿಂದ ಕರೆದುಕೊಂಡು ಹೋದುದೇ ಆದರೆ ಅದು ಅವನಿಗೆ ಯೋಗ್ಯವಾಗಿರುವುದು' ಎಂದಳು ಹನುಮನು ರಾಮನಿಗೆ ನಂಬಿಕೆಯಾಗುವುದಕ್ಕಾಗಿ ಒಂದು ಗುರುತನ್ನು ಕೊಡಬೇಕೆಂದು ಕೇಳಿದನು. ಆಗ ಸೀತೆ ಕಾಕಾಸುರನ ಮೇಲೆ ಕ್ರುದ್ಧನಾದ ರಾಮನು ಅದನ್ನು ಶಿಕ್ಷಿಸದೆ ಕ್ಷಮಿಸಿದ ವೃತ್ತಾಂತವನ್ನು ಹೇಳಿ, ಬಹುಕಷ್ಟದಿಂದ ರಕ್ಷಿಸಿಕೊಂಡಿದ್ದ ಚೂಡಾಮಣಿಯನ್ನು ಕೊಟ್ಟಳು. ರಾಮ ಲಕ್ಷ್ಮಣರ ಕ್ಷೇಮವನ್ನು ತಿಳಿಸುತ್ತಾ ಹನುಮನನ್ನು ಬೀಳ್ಕೊಟ್ಟಳು.

ರಾವಣನ ಆಜ್ಞೆಯಂತೆ ಆ ಮಹಾಭಕ್ತನ ಬಾಲಕ್ಕೆ ಬೆಂಕಿ ಹಚ್ಚಿ ಮೆರವಣಿಗೆ ಮಾಡುತ್ತಿರುವರೆಂಬ ಕರ್ಣಕಠೋರ ವಾರ್ತೆಯನ್ನು ಜಾನಕಿಯು ಕೇಳಿ ಏನು ಕೇಡಾಗದಿರಲೆಂದು ಪ್ರಾರ್ಥಿಸಿದಳು. 'ಹೇ ಅಗ್ನಿದೇವ ನಾನು ಪತಿಸೇವೆಯನ್ನೇನು ಮಾಡಿದವಳಾಗಿದ್ದರೆ ತಪಸ್ಸನ್ನು ಆಚರಿಸಿದ್ದರೆ. ನನ್ನಲ್ಲಿ ಪಾತಿವ್ರತ್ಯವಿರುವುದಾದರೆ ನೀನು ಹನುಮಂತನ ವಿಷಯದಲ್ಲಿ ಶೀತಲವಾಗು ಶ್ರೀ ರಾಮನಿಗೆ ನನ್ನಲ್ಲಿ ಕರುಣೆ ಇದ್ದರೆ ನನ್ನ ಭಾಗ್ಯವು ಇನ್ನೂ ಸ್ವಲ್ಪ ಉಳಿದಿದ್ದರೆ ಹನುಮಂತನ ವಿಷಯದಲ್ಲಿ ಶೀತಲನಾನು. ನನ್ನ ನಡತೆಯು ಪರಿಶುದ್ಧವಾಗಿದೆಯೆಂದೂ ನಾನು ಶ್ರೀ ರಾಮನ ದರ್ಶನಕ್ಕಾಗಿ ಹಾತೊರೆಯುತ್ತಿರುವೆನೆಂದು ಧರ್ಮಾತ್ಮನಾದ ರಾಮನು ತಿಳಿದುಕೊಂಡಿರುವುದೇ ಆದರೆ ಹನುಮಂತನ ವಿಷಯದಲ್ಲಿ ಶೀತಲನಾಗು. ಸತ್ಯಸಂಧನಾದ ಸುಗ್ರೀವನು ಈ ದುಃಖಸಮುದ್ರದಿಂದ ನನ್ನನ್ನು ದಾಟಿಸುವುದು ನಿಜವಗಿದ್ದರೆ ನೀನು ಹನುಮಂತನ ವಿಷಯದಲ್ಲಿ ಶೀತಲನಾಗು' ಎಂದು ಸಾಧ್ವಿ ಪ್ರಾರ್ಥಿಸಿದಳು. ಇವಳ ಪ್ರಾರ್ಥನೆಗೆ ಉರಿಯೂ ಕೂಡ ತಣ್ಣಗಾಯಿತು. ಹನುಮನು ಸೀತೆಯನ್ನು ಮತ್ತೆ ಕಂಡು ಕ್ಷೇಮವನ್ನು ವಿಚಾರಿಸಿಕೊಂಡು ಹೋದನು. ಶ್ರೀರಾಮನು ತನ್ನನ್ನು ಬಿಡಿಸಿಕೊಂಡು ಹೋಗುವಂತೆ ಶರಣಾದರೂ ರಾವಣನು ಕ್ಷಮಾರ್ಹನಲ್ಲವೆಂದೂ ಮತ್ತೊಮ್ಮೆ ರಾಮಭಕ್ತನಿಗೆ ಆದೇಶವನ್ನು ನೀಡಿ ಆಶೀರ್ವದಿಸಿ ಕಳುಹಿಸಿಕೊಟ್ಟಳು. ಪಂಚವಟಿಯ ತನ್ನ ಸಹಧರ್ಮಾಚರಣೆಯು ಫಲಕಾರಿಯಾಯಿತೆಂದು ತಿಳಿದು ಮನಃಶಾಂತಿಯನ್ನು ಪಡೆದಳು.

## ಯುದ್ಧಕಾಂಡ

ಸೀತೆಯ ಆಶೀರ್ವಾದವನ್ನು ಪಡೆದು ಹೋದ ಹನುಮನು ಸೀತಾದೇವಿ ಕೊಟ್ಟಿದ್ದ ಚೂಡಾಮಣಿಯನ್ನು ರಾಮನಿಗೆ ನೀಡಿ ಆಕೆ ಪಡುತ್ತಿದ್ದ ಸಂಕಟವನ್ನು ವಿವರಿಸಿದನು. ಸುಗ್ರೀವಾಜ್ಞೆಯಂತೆ ಕಪಿಸೇನೆ ಸಮುದ್ರವನ್ನು ದಾಟಲು ಸೇತುವೆಯನ್ನು ನಿರ್ಮಿಸಿತು. ಹೆಣ್ಮರುಳನಾದ ರಾವಣನು ಅದನ್ನು ತಡೆಯುವ ಪ್ರಯತ್ನವನ್ನು ಮಾಡಲಿಲ್ಲ. ಸರಮೆ, ಅನಲೆ, ತ್ರಿಜಟೆಯರು ಮಹಾಗೂಢಚರ್ಯೆಯಲ್ಲಿ ನಿರತರರಾಗಿ ರಾಜ್ಯದ ಆಗು ಹೋಗುಗಳನ್ನು ತಿಳಿಸುತ್ತಿದ್ದರು. ಜಾನಕಿಯ ತುಮುಲ ತೋಟಿಯ ತರಂಗಗಳು ಹಿಮ್ಮಡಿಸುತ್ತಿದ್ದವು.

ಭಯಗ್ರಸ್ತನಾಗಿದ್ದ ರಾವಣನು ಮಂತ್ರಿಗಳೊಡನೆ ಆಲೋಚಿಸಿ, ಅವರನ್ನೆಲ್ಲಾ ಕಳುಹಿ, ವಿದ್ಯುಜ್ಜಿಹ್ವನೆಂಬ ರಾಕ್ಷಸನನ್ನು ಕರೆಸಿಕೊಂಡು ಅಶೋಕವನಕ್ಕೆ ಹೋಗಿ ಅವನಿಂದ ಶ್ರೀರಾಮನ ಮಾಯತಲೆಯನ್ನು ಸೃಷ್ಟಿಸಿ ಸೀತೆಗೆ ತೋರಿ ನೀನು ತನ್ನನ್ನು ವರಿಸುವುದೊಂದು ನಿನಗೆ ಉಳಿದಿರುವ ಮಾರ್ಗ ಎಂದನು.

ಜಾನಕಿಯು ಪತಿಯ ನಿಜವಾದ ಶಿರಸ್ಸೆಂದು ಭ್ರಮಿಸಿ ರೋಧಿಸತೊಡಗಿದಳು. ಕೈಕೆಯನ್ನು ನಿಂದಿಸಿದಳು. ತಾನು ಮಾಡಿದ ವೀರವ್ರತ ನಿಷ್ಫಲವಾಯಿತು ಎಂದು ಹಲುಬಿದಳು. ಜ್ಯೋತಿಷ್ಯರ ನುಡಿ ಸುಳ್ಳಾಯಿತು ತನಗೆ ವೈಧವ್ಯದ ಕಳಂಕ ಅಂಟಿಕೊಂಡಿತು. ನೀತಿಶಾಸ್ತ್ರ ಪಾರಂಗತವಾದ ನೀನು ಸಕಲೋಪಾಯಗಳನ್ನು ಬಲ್ಲವನು. ಪ್ರಮಾದಗಳಾಗದಂತೆ ಎಚ್ಚರಿಕೆಯಿಂದ ಕಾರ್ಯವನ್ನು ನಡೆಸುವುದರಲ್ಲಿ ನಿಪುಣನಾದವನು ನಿದ್ರಿಸುತ್ತಿರುವಾಗ ಹತನಾದನೆಂಬ ಮಾತನ್ನು ತಾನು ನಂಬಲಾರೆ ಎಂದು ದುಃಖಿಸಿದಳು. 'ನಾನು ನಿತ್ಯವೂ ಪೂಜಿಸುತ್ತಿದ್ದ ನನ್ನಪ್ಪ ಕೊಟ್ಟಿದ್ದ ಪ್ರಿಯದನಸ್ಸು ಇದೇ ಅಲ್ಲವೇ? ಕಣ್ಣೆತ್ತಿ ನೋಡು ಮಾತಾಡು ನನ್ನ ಕೈ ಹಿಡಿಯುವಾಗ ನಿನ್ನನ್ನು ಬಿಟ್ಟು ಯಾವುದನ್ನೂ ಆಚರಿಸುವುದಿಲ್ಲ' ಎಂದು ನೀನು ಹೇಳಿದ್ದನ್ನು ನೆನಪಿಗೆ ತಂದುಕೊ ರಾಮ ನನ್ನಿಂದ ನಿನ್ನ ಕೊಲೆಯಾಯಿತು ರಾವಣ ನನ್ನನ್ನು ಈಗಲಾದರೂ ಕಡಿದು ನನ್ನ ಪತಿಯ ದೇಹದ ಮೇಲಿಡು ಎರಡನ್ನೂ ಒಂದು ಮಾಡು ಪುಣ್ಯಕಟ್ಟಿಕೊ' ಎಂದಳು.

ರಾವಣನು ಹೊರಟು ಹೋದ ಮೇಲೆ ಸೀತೆ ಆತ್ಮಹತ್ಯೆ ಮಾಡಿಕೊಳ್ಳದಂತೆ ಕಾವಲಿದ್ದ ವಿಭೀಷಣನ ಹೆಂಡತಿ ಸರಮೆ ವೈದೇಹಿಯ ಆಪ್ತಳಾಗಿದ್ದು ಬಹುವಾಗಿ ಆಕೆಯನ್ನು ಸಮಾದಾನಪಡಿಸಿದಳು. 'ಶ್ರೀರಾಮ ಲಕ್ಷ್ಮಣರನ್ನು ತಾನು ನೋಡಿ ಬಂದಿರುವುದಾಗಿ, ಅವರು ಸಾಗರ ತೀರದಲ್ಲಿ ನೆರೆದಿರುವ ವಾನರ ವೀರರೊಡನೆ ಸುರಕ್ಷಿತವಾಗಿದ್ದಾರೆ ಎಂದು ತಿಳಿಸುತ್ತಾಳೆ. ಇನ್ನು ಕೆಲವು ದಿನಗಳಲ್ಲೆ ರಾಕ್ಷಸರೆಲ್ಲರೂ ಹತರಾಗಿ ನೀನು ಬಹುಬೇಗನೆ ನಿನ್ನ ಪತಿಯನ್ನು ಸೇರುವೆ' ಎಂದು ಸಾಂತ್ವಾನಗೊಳಿಸಿದಳು.

ಸರಮೆಯೂ ತಾನೇ ರಾಮನ ಬಳಿಗೆ ಹೋಗಿ ನಿನ್ನ ಕುಶಲವನ್ನು ತಿಳಿಸಿ ಅವನ ಸಂದೇಶವನ್ನು ತರುವೆಂದಳು. ಸೀತೆ ಬೇಡವೆಂದು ತಡೆದು ರಾವಣ ಈಗ ಏನು ಮಾಡಬೇಕೆಂದಿದ್ದಾನೆ ಅದನ್ನು ತಿಳಿದುಕೊಂಡು ಬರುವಂತೆ ಹೇಳಿದಳು. ಗೆಳತಿಯ ಮಾತಿನಂತೆ ಸರಮೆ ಹೊರಟಳು. ಸರಮೆಯ ಬರುವಿಕೆಯ ನಿರೀಕ್ಷೆಯಲ್ಲಿಯೇ ಇದ್ದ ಸೀತೆ ಅವಳು

ಬಂದೊಡನೆ ತನ್ನ ಪಕ್ಕದಲ್ಲೇ ಆಸನವನ್ನು ಹಾಕಿ ಕುಳ್ಳಿರಿಸಿಕೊಂಡಳು. 'ರಾವಣನ ತಾಯಿಯಾದ ಕೈಕಸಿಯೂ ಮಂತ್ರಿವೃದ್ಧನಾದ ಅವಿದ್ದನೆಂಬುವನು ನಿನ್ನನ್ನು ಬಿಟ್ಟು ಬಿಡಬೇಕೆಂದು ನಾನಾ ವಿಧದಲ್ಲಿ ಬೋಧಿಸಿದರು. ಆದರೆ ಆತ ಕೇಳಲಿಲ್ಲ. ಸಮಸ್ತ ರಾಕ್ಷಸರನ್ನು, ತನ್ನನ್ನು ವಧಿಸಿದ ಮೇಲೆಯೇ ಸೀತೆಯ ಬಿಡುಗಡೆ ಎಂಬ ಛಲದಲ್ಲಿದ್ದಾನೆ' ಎಂದಳು.

ಶ್ರೀರಾಮಚಂದ್ರನು ಯುದ್ಧ ಮಾಡುವುದಕ್ಕೆ ಮುಂಚೆ ಅಂಗದನನ್ನು ರಾವಣನ ಬಳಿಗೆ ಕಳುಹಿಸಿ ಸೀತೆಯನ್ನು ಬಿಟ್ಟು ಜೀವವನ್ನು ಉಳಿಸಿಕೊಳ್ಳುವಂತೆ ಹೇಳಿಕಳುಹಿಸಿದನು. ಅದು ವ್ಯರ್ಥವಾಗಿ ಘೋರಯುದ್ಧ ಪ್ರಾರಂಭವಾಯಿತು. ರಾಕ್ಷಸ ಸಂಹಾರ ಧಾರಾಕಾರವಾಗಿ ಜರುಗಿತು. ಇಂದ್ರಜಿತುವಿನ ಸರ್ಪಬಾಣದಿಂದ ರಾಮಲಕ್ಷ್ಮಣರು ಮೂರ್ಛೆ ಹೋದರು. ಕಪಿ ಸೈನ್ಯವು ತತ್ತರಿಸಿತು. ರಾಕ್ಷಸರು ಉನ್ಮಾದಾವಸ್ಥೆಗೇರಿದರು. ಸತ್ತ ರಾಮ ಲಕ್ಷ್ಮಣರನ್ನು ನೋಡುವಂತೆ ಸೀತೆಯನ್ನು ಪುಷ್ಪಕವಿಮಾನದಲ್ಲಿ ಯುದ್ಧರಂಗಕ್ಕೆ ಕರೆದುಕೊಂಡು ಬಂದರು. ರಾಮಲಕ್ಷ್ಮಣರು ಸತ್ತರೆಂದು ತನ್ನ ದೌರ್ಭಾಗ್ಯವನ್ನು ಕಂಡು ಹಲುಬಿದಳು. ತನ್ನ ಅರಮನೆಯ ಜ್ಯೋತಿಷ್ಯರು ತಾನು ಪುತ್ರವತಿಯಾಗುವನೆಂದೂ ವೈದವ್ಯಯೋಗವಿಲ್ಲವೆಂದೂ ಹೀನಹೆಂಗಸರಿಗಿರುವ ಯಾವ ಕೆಟ್ಟ ಸಾಮುದ್ರಿಕ ಲಕ್ಷಣಗಳಿಲ್ಲವೆಂದೂ ಹೇಳಿದ್ದೆಲ್ಲಾ ಸುಳ್ಳಾಯಿತು. ಮಹಾಸಾದ್ವಿ ಅನಸೂಯದೇವಿ ಸುಮಂಗಲೆಯಾಗಿ ಬಾಳೆಂದು ಹರಸಿದ್ದು ಅಸತ್ಯವಾಯಿತು. ಕೌಸಲ್ಯ ಸುಮಿತ್ರೆಯರು ಹೇಗೆ ಈ ಪುತ್ರ ವಿಯೋಗವನ್ನು ಕೇಳಿ ಜೀವಿಸಿರಬಲ್ಲರು. ಭರತನಗತಿಯೇನು? ಎಂದು ಹಲವು ವಿಧದಲ್ಲಿ ಹಲುಬಿದಳು. ಕುಟಿಲ ಕ್ರೂರ ಕಾಮಾಂಧರ ಕಿರುಕುಳವನ್ನು ಸಹಿಸುವುದು ಸಾಧ್ಯವಿಲ್ಲವಲ್ಲಾ ಎಂದಳು. ಆಮೇಲೆ ಆಂತರ್ಯವನ್ನು ವಿಚಾರಿಸತೊಡಗಿದಳು. ಒಂದು ಅಭಯಾಶ್ವಾಸನೆಯ ದರ್ಶನವಾಯಿತು. ಅದಕ್ಕೆ ಸರಿಯಾಗಿ ಸಂಗಡದಲ್ಲೇ ಬಂದಿದ್ದ ತ್ರಿಜಟೆ ರಾಜಪುತ್ರರನ್ನು ಚೆನ್ನಾಗಿ ಗಮನಿಸಿ ಸೀತೆಗೆ ಸಮಾಧಾನ ಮಾಡುತ್ತಾ 'ಸೀತೆ ಏಕೆ ಶೋಕಿಸುವೆ, ನಿನ್ನ ಪತಿ ಮತ್ತು ಅವನ ತಮ್ಮ ಖಂಡಿತವಾಗಿಯೂ ಬದುಕಿದ್ದಾನೆ. ದೇವಿ ನಾನು ಎಂದೆಂದೂ ಸುಳ್ಳು ಹೇಳುವವಳಲ್ಲ. ಮುಂದೆ ಆಡುವವಳೂ ಅಲ್ಲ ಅವರು ಮೃತರಾಗಿದ್ದಾರೆ ಪುಷ್ಪಕವೆಂಬ ದಿವ್ಯ ವಿಮಾನವು ಪತಿಹೀನೆಯಾದವಳನ್ನು ಹೊರುತ್ತಿರಲಿಲ್ಲ. ಸೀತೆಯ ಪಾತಿವ್ರತ್ಯವೇ ಅವರನ್ನು ಜೀವಂತವಾಗಿ ಉಳಿಸಿದೆ' ಎಂದಳು. ಅದಕ್ಕೆ ಮೈಥಿಲಿಯು ತ್ರಿಜಟೆ ಹೇಳಿದಂತೆ ಆಗಿರಲೆಂದು ಹರಸಿ ಪುಷ್ಪಕ ವಿಮಾನದಲ್ಲಿ ಅಶೋಕವನಕ್ಕೆ ಬಂದಳು.

ಘೋರ ಸಂಗ್ರಾಮದಲ್ಲಿ ಕುಂಭಕರ್ಣ ಇಂದ್ರಜಿತ್ತಾದಿಯಾಗಿ ಎಲ್ಲರೂ ಮಡಿದರು. ಶೋಕದಿಂದ ಕ್ರುದ್ಧನಾದ ರಾವಣನು ಸೀತೆಯನ್ನೇ ಕೊಲ್ಲುವೆನೆಂದು ಅಶೋಕವನಕ್ಕೆ ಧಾವಿಸಿದನು. ಅವನ ರೌದ್ರಾವತಾರವನ್ನು ನೋಡಿ ವಿಲಾಪಿಸತೊಡಗಿದಳು. ಕಡೆಗೆ ಅವಳನ್ನು ಬಿಟ್ಟ ರಾವಣ ಯುದ್ಧಮುಖವಾದನು. ಸೀತೆಯ ಪಾತಿವ್ರತ್ಯದ ಬೆಂಕಿಯೇ ಅವನನ್ನು ಆಗಲೇ ಅರ್ಧಸುಟ್ಟು ಹಾಕಿತು. ಈ ಪುತ್ರಶೋಕವು ಉಳಿದದ್ದನ್ನು ಕ್ಷಯಿಸಿತು. ರಾಮ ರಾವಣರ ಅಂತಿಮ ಯುದ್ದವು ಪ್ರಾರಂಭವಾಯಿತು. ಸೀತೆ ಪ್ರಾರ್ಥಿಸಿದಳು, 'ಹೇ ಪಂಚಭೂತಗಳಿರಾ ಹೇ ದೇವ ದೇವತೆಗಳಿರಾ ಹೇ ಪತಿವ್ರತೆಯರೇ, ಲೋಕ ಸಂಗ್ರಹಾರ್ಥವಾಗಿ ಇದೋ ನನ್ನ ಪಾತಿವ್ರತ್ಯದ ತೇಜಸ್ಸನ್ನು ಶ್ರೀರಾಮನ ಧನುಸ್ಸಿನಲ್ಲಿ ಸಮಾವೇಶಗೊಳಿಸಿದ್ದೇನೆ. ಸ್ತ್ರೀ ಶಕ್ತಿಯನ್ನು ಒಂದುಗೂಡಿಸಿದ್ದೇನೆಂದು ಒಮ್ಮನದಿಂದ ಸಮಾದಿಸ್ಥಳಾದಳು.

ರಾಮನ ಆಜ್ಞೆಯಂತೆ ಹನುಮನು ರಾವಣನು ಮಡಿದ ಸುದ್ದಿಯನ್ನು ತಿಳಿಸಿದನು. ರಾಮನಿಗೆ ಜಯವಾದ ಸುದ್ದಿ ಕೇಳಿ ಆನಂದಭರಿತಳಾದ ಸೀತೆ ಕ್ಷಣಕಾಲ ಮೌನದಲ್ಲೆ ಬಂಧಿಯಾದಳು. ಜಾನಕಿಯು ಹರ್ಷಾತಿಶಯದಿಂದ ಗದ್ಗದಿತ ಕಂಠಳಾಗಿ ತೊದಲುತ್ತ ಇಂತಹ ಸಂತೋಷದ ಸುದ್ದಿಯನ್ನು ತಂದಿರುವ ನಿನಗೆ ತ್ರಿಲೋಕಾಧಿಪತ್ಯವನ್ನು ಕೊಟ್ಟರೂ ಸಾಲದೆಂದಳು. ಕಾವಲಿಗಿದ್ದು ಪೀಡಿಸುತ್ತಿದ್ದ ರಾಕ್ಷಸ ಸ್ತ್ರೀಯರನ್ನು ಕೊಂದು ಹಾಕಲೇ ಎಂದು ಹೇಳಿದ ಹನುಮನಿಗೆ ಬೇಡವೆಂದು ನಿರಾಕರಿಸಿ ಅವರೆಲ್ಲರೂ ತಮ್ಮ ಒಡೆಯನ ಆಜ್ಞೆಯಂತೆ ನಡೆದುಕೊಂಡಿದ್ದಾರೆ. ಇದರಲ್ಲಿ ಅವರ ತಪ್ಪಿಲ್ಲ ಎಂದು ಸಮಾಧಾನ ಮಾಡುತ್ತಾಳೆ. ತನ್ನ ಸಂದೇಶಕ್ಕಾಗಿ ಕಾಯುತ್ತಿರುವ ಹನುಮನಿಗೆ 'ನನ್ನ ಸ್ವಾಮಿಯನ್ನು ನೋಡಲಿಚ್ಛಿಸುವೆನು' ಎಂದಷ್ಟೆ ಹೇಳಿ ಕಳುಹಿಸುತ್ತಾಳೆ.

ಜಾನಕಿಯ ಮನದಿಚ್ಛೆಯನ್ನು ತಿಳಿದ ರಾಮನು ಚಿಂತಾಕ್ರಾಂತನಾಗಿ ಕಂಬನಿಗರೆಯುತ್ತ ವಿಭೀಷಣನಿಗೆ 'ಸೀತೆಗೆ ಅಭ್ಯಂಜನ ಮಾಡಿಸಿ ದಿವ್ಯಾಂಗರಾಗವನ್ನು ಲೇಪಿಸಿ ದಿವ್ಯಾಭರಣಗಳಿಂದ ಅಲಂಕರಿಸಿ ಇಲ್ಲಿಗೆ ಕರೆದುಕೊಂಡು ಬಾ ತಡಮಾಡಬೇಡ' ಎಂದನು. ವಿಭೀಷಣನು ತನ್ನ ಸ್ತ್ರೀಯರ ಮೂಲಕ ಸೀತೆಗೆ ಈ ವಿಷಯವನ್ನು ತಿಳಿಸಿದಾಗ ವೈದೇಹಿ ತಾನಿರುವ ಸ್ಥಿತಿಯಲ್ಲಿಯೇ ರಾಮನನ್ನು ಕಾಣುವ ಆಸೆಯನ್ನು ವ್ಯಕ್ತಪಡಿಸುವಳು. ತಾನಿರುವ ಸ್ಥಿತಿ ರಾಮನಿಗೆ ಅರಿವಾಗಬೇಕು ಎಂಬುದೇ ಆಕೆಯ ಆಶಯ. ಪ್ರಭುವಿನ ಅಪ್ಪಣೆಯನ್ನು ಪರಿಪಾಲಿಸುವುದು ನಮ್ಮಿರ್ವರ ಧರ್ಮವೆಂದು ಹೇಳಿದ ವಿಭೀಷಣನ ಮಾತನ್ನು ಒಪ್ಪಿ ಸಾಧ್ವೀ ಸೀತೆ ಅಲಂಕೃತಳಾಗಿದ್ದ ಸೀತಾದೇವಿಯನ್ನು ಪಲ್ಲಕ್ಕಿಯಲ್ಲಿ ಕರೆತಂದು ರಾಮನ ಮುಂದೆ ನಿಲ್ಲಿಸಿದರು. ಒಮ್ಮೆಲೆ ರಾಮನಿಗೆ ಹರ್ಷ, ಮರುಕ, ರೋಷ ಏಕಕಾಲದಲ್ಲಿ ಉಂಟಾಯಿತು.

ಪತ್ನಿಯಲ್ಲಿ ಉಪೇಕ್ಷೆಯನ್ನು ಸೂಚಿಸುವ ಧಾರುಣವಾದ ರಾಘವನ ಮುಖಭಾವಗಳಿಂದ ಅವನಿಗೆ ಅಸಮಾಧಾನವಾಗಿದೆಯೆಂದು ಲಕ್ಷ್ಮಣ, ಸುಗ್ರೀವ, ಹನುಮರು ಬಹಳ ವ್ಯಥೆಪಟ್ಟರು. ಲಜ್ಜೆಯಿಂದ ಬಂದ ಸೀತೆ 'ಆರ್ಯಪುತ್ರ' ಎಂದು ಕರೆದು ಅಳತೊಡಗಿದಳು. ಪತಿಯನ್ನೆ ದೈವವೆಂದು ನಂಬಿದ್ದ ಆ ಭೂಜಾತೆ ಪತಿಯ ಮುಖವನ್ನು ಕಂಡು ಆನಂದಭರಿತಳಾದಳು. ರಾಮಚಂದ್ರ ತನ್ನ ಮುಂದೆ ಬಂದು ನಿಂತ ಆ ಶಿರೋಮಣಿಯನ್ನು 'ಶತ್ರುವನ್ನು ಕೊಂದು ನಿನ್ನನ್ನು ಮುಕ್ತಗೊಳಿಸಿದ್ದೇನೆ. ಪೌರುಷವನ್ನು ಮೆರೆಸಿ ಏನನ್ನು ಮಾಡಬಹುದೋ ಅದನ್ನು ಸಾಧಿಸಿರುವೆನು. ನನ್ನ ಮೇಲೆಸಗಿದ ಆಕ್ರಮಣಕ್ಕೆ ತಕ್ಕ ಪ್ರತಿಕಾರವನ್ನು ಮಾಡಿ ನನ್ನ ಕ್ರೋಧವನ್ನು ತೀರಿಸಿಕೊಂಡಿರುವೆನು. ನನ್ನ ಪೌರುಷವೇನೆಂಬುದನ್ನು ಜಗತ್ತು ಈಗ ಕಂಡಿತು. ಈ ಪರಿಶ್ರಮವು ನಿನಗೋಸ್ಕರವಾಗಿ ಅಲ್ಲ ಎಂಬುದು ನಿನಗೆ ತಿಳಿದಿರಲಿ ಸದಾಚಾರವನ್ನು ರಕ್ಷಿಸುವುದಕ್ಕಾಗಿಯೂ ಎಲ್ಲೆಡೆಯೂ ನನಗೆ ಬರುವ ಅಪವಾದವನ್ನು ನಿರ್ಮೂಲಗೊಳಿಸುವುದ ಕ್ಕಾಗಿಯೇ ವಿಶ್ವವಿಖ್ಯಾತವಾದ ನನ್ನ ವಂಶಕ್ಕೆ ಅಂಟುವ ಅಪಕೀರ್ತಿಯನ್ನು ವಿಧ್ವಂಸಗೊಳಿಸುವುದಕ್ಕಾಗಿ ಈ ಪರಿಶ್ರಮವನ್ನು ವಹಿಸಿದೆ. ಪರಗೃಹವಾಸದಿಂದ ನಿನ್ನ ಚಾರಿತ್ರ್ಯದಲ್ಲಿ ಸಂದೇಹ ಉಂಟಾಗಿದೆ. ನನ್ನೆದುರಿಗೆ ನಿಂತಿರುವ ನೀನು ನೇತ್ರರೋಗಿಯ ಎದುರಿಗೆರುವ ದೀಪದಂತೆ ಕಣ್ಣನ್ನು ಕೊರೆಯುತ್ತಿರುವೆ. ಆದ್ದರಿಂದ ನೀನು ಎಲ್ಲಿಗಾದರೂ ಹೋಗು' ಎಂದನು.

ಇಲ್ಲಿ ರಾಮ ತಿಳಿಸಿದ 'ನೇತ್ರರೋಗಿಯ ಎದುರಿಗಿರುವ ದೀಪದಂತೆ' ಎಂಬ ಮಾತು ನೀನು ದೀಪದಷ್ಟೆ ಪರಿಶುದ್ಧಳು ನನ್ನ ಕಣ್ಣಿಗೆ ರೋಗತನ ಆವರಿಸಿದೆ ಅದನ್ನು ನಿನ್ನ ಪರಿಶುದ್ಧ ಪಾತಿವ್ರತ್ಯದ ದೀಪದಿಂದ ಬೆಳಗು ಎಂಬ ಮಾತು ಸಹ ಧ್ವನಿಸುವಂತಿದೆ. ಹಾಗೆಯೇ ಅದನ್ನು ಅಗ್ನಿಗೆ ಪ್ರವೇಶ ಮಾಡುವುದರ ಮೂಲಕ ಸಾಬೀತುಗೊಳಿಸು ಎಂಬುದು ಅಡಗಿರುವಂತಿದೆ ಅದಕ್ಕಾಗಿಯೇ ಸೀತೆ ಲಕ್ಷ್ಮಣನಿಗೆ ಚಿತೆಯನ್ನು ಸಿದ್ಧಗೊಳಿಸುವಂತೆ ಹೇಳುವುದು.

ಮತ್ತೆ ಮಾತನ್ನು ಮುಂದುವರೆಸಿದ ರಘುರಾಮನು 'ಉತ್ತಮ ಕುಲದಲ್ಲಿ ಜನಿಸಿದ ತೇಜಸ್ವಿಯಾದ ಯಾವ ಪುರುಷನು ತಾನೆ ಚಿರಕಾಲದವರೆಗೆ ಪರಗೃಹದಲ್ಲಿರುವ ಸ್ತ್ರೀಯನ್ನು ಒಳ್ಳೆಯ ಅಭಿಪ್ರಾಯದಿಂದ ಹೃತ್ಪೂರ್ವಕವಾಗಿ ಸ್ವೀಕರಿಸಿಯಾನು? ಎಲ್ಲಿಯಾದರೂ ಹೋಗು ಯಾರನ್ನಾದರೂ ಜೀವನಕ್ಕಾಗಿ ಆಶ್ರಯಿಸು' ಎಂದು ನುಡಿದನು.

**ಸೀತಾದೇವಿ ತನ್ನ ಪಾತಿವ್ರತ್ಯಾಗ್ನಿಯಿಂದ ಅಗ್ನಿಯನ್ನು ಜಯಿಸಿದ್ದು**

ಒಂದು ವರ್ಷ ಪತಿಯಿಂದ ದೂರವಿದ್ದು ಅವನ ನುಡಿಗಳನ್ನು ಕೇಳಬೇಕು ಎಂದು ಹಾತೊರೆಯುತ್ತಿದ್ದ ಸತಿಗೆ ಇಂಥ ಮಾತುಗಳನ್ನು ಕೇಳಿ ಅಲ್ಲಿಯೇ ಭೂಮಿ ಬಾಯ್ದೆರೆದು ನುಂಗಿ ಬಿಡಬಾರದೆ ನನ್ನನ್ನು ಎನಿಸುವುದು ಸಹಜತಾನೇ? ಸೀತೆ ಕಣ್ಣೀರು ಸುರಿಸುತ್ತಾ 'ಈ ರೀತಿಯಲ್ಲಿ ನನಗೆ ಆಡಬಾರದ ಮಾತನ್ನೇಕೆ ಹೇಳುವೆ? ಕಿವಿಯನ್ನು ಸೀಳುವಂತಹ ಈ ಕಠೋರವಚನವನ್ನು ನೀನು ಹೇಳಬಹುದೆ? ವೀರಾಗ್ರಣಿ ಅಸಂಸ್ಕೃತನಾದ ಒಬ್ಬ ಸಾಮಾನ್ಯ ಮನುಷ್ಯನು ಸಂಸ್ಕೃತಿ ಶೂನ್ಯಳಾದ ಒಬ್ಬ ಹೆಂಗಸಿಗೆ ನುಡಿಯುವಂತೆ ನುಡಿಯುತ್ತಿರುವೆಯಲ್ಲ? ಓ ಮಹಾಬಾಹು ನೀನು ತಿಳಿದುಕೊಂಡಿರುವಂತೆ ನಾನಿಲ್ಲ. ನನ್ನ ಚಾರಿತ್ರ್ಯದ ಮೇಲೆ ಆಣೆಯಿಟ್ಟು ಹೇಳುತ್ತಿದ್ದೇನೆ ನನ್ನನ್ನು ನಂಬು. ನನ್ನ ನಡತೆಯನ್ನು ನೀನು ಕಂಡಿಲ್ಲವೆ? ನಾನು ದಿಕ್ಕಿಲ್ಲದೆ ಪರಾಧೀನಳಾದಾಗ ಆತನ ದೇಹಸ್ಪರ್ಶವು ನನಗಾಗಿರಬಹುದು ಅದರಲ್ಲಿ ನಿನ್ನ ಇಚ್ಛೇ ಏನಿದೆ? ಅದು ದೈವಾಯತ್ತವಾದ ಅಪರಾಧ ನನಗೆ ಅಧೀನವಾದದ್ದು ನನ್ನ ಹೃದಯ ಅದು ಸದಾ ನಿನ್ನಲ್ಲಿಯೇ ನೆಲೆಸಿದೆ. ಈ ದೇಹವು ಪರಾಧೀನವಾದಾಗ ನಾನೇನು ಮಾಡಲು ಸಾಮರ್ಥ್ಯವಿತ್ತೆ? ದೇಹಸ್ಪರ್ಶವಾಗದಂತೆ ತಡೆಯಲು ನನಗೆ ಸಾಮರ್ಥ್ಯವಿತ್ತೆ? ನಾವು ಚಿರಕಾಲದಿಂದ ಒಡನಾಡಿಗಳು, ನನ್ನ ಮಾನ ರಕ್ಷಣೆ ನಿನ್ನದು ಹೀಗಿದ್ದರೂ ನನ್ನ ಶೀಲವು ನಿನಗೆ ತಿಳಿದಿಲ್ಲವಾದರೆ ನಾನು ನಾನು ಶಾಶ್ವತವಾಗಿ ಕೆಟ್ಟೆನು. ನನ್ನನ್ನು ಹುಡುಕುವುದಕ್ಕಾಗಿ ಶೂರನಾದ ಹನುಮಂತನನ್ನು ಕಳುಹಿಸಿದ್ದೆಯಲ್ಲ. ಆಗ ಲಂಕೆಯಲ್ಲಿದ್ದಾಗಲೇ ನನ್ನನ್ನು ಏಕೆ ತ್ಯಜಿಸಲಿಲ್ಲ. ಅವನು ಆ ಮಾತನ್ನು ತಿಳಿಸಿದ್ದರೆ ಆಗಲೇ ಆ ವಾನರೋತ್ತಮನೆದುರಿಗೇ ನಾನು ಪ್ರಾಣವನ್ನು ಬಿಡುತ್ತಿದ್ದೆನು. ವ್ಯರ್ಥವಾಗಿ ನಿನಗೆ ಈ ರಣ ಪರಿಶ್ರಮವೂ ಪ್ರಾಪ್ತವಾಗುತ್ತಿರಲಿಲ್ಲ. ಪ್ರಾಣವನ್ನು ಮುಡುಪಿಟ್ಟು ಯುದ್ಧಮಾಡಬೇಕಾಗಿರಲಿಲ್ಲ. ನಿನ್ನ ಮಿತ್ರರಿಗೆ ನಿಷ್ಫಲವಾಗಿ ಕ್ಲೇಶವೂ ಸಂಭವಿಸುತ್ತಿರಲಿಲ್ಲ. ಅಲ್ಪ ಮನುಷ್ಯನಂತೆ ಕೋಪವೊಂದನನೆ ನೀನು ಆಶ್ರಯಿಸಿರುವೆ 'ಹೆಂಗಸರು ಚಪಲರು' ಎಂದು ಸ್ತ್ರೀ ಸ್ವಭಾವವೊಂದನ್ನೇ ಮುಂದಿಟ್ಟು ಮಾತನಾಡಿದ್ದಿಯೇ ಜನಕರಾಜನ ಮಗಳೆಂದು, ವಸುಧಾತಳದಿಂದಲೇ ನಾನು ಜನಿಸಿರುವೆನೆಂಬುದನ್ನು ನೀನು ಗಣಿಸಲಿಲ್ಲ. ನನ್ನ ಶೀಲಸ್ವಭಾವಗಳೆಲ್ಲವನ್ನೂ ಬಲ್ಲವನಾದರೂ ಅದೊಂದನ್ನು ನೀನು ಎಣಿಸಲಿಲ್ಲ. ಬಾಲೆಯಾಗಿದ್ದ

ನನ್ನನ್ನು ಬಾಲ್ಯದಲ್ಲಿಯೇ ಕೈಹಿಡಿದು ನೋಡುತ್ತಾ ಬಂದಿದ್ದೀಯೆ. ಅಗ್ನಿಸಾಕ್ಷಿಯಾಗಿ ಹಿಡಿದ ಈ ಕೈ ನಿನಗೆ ಪ್ರಮಾಣವಾಗಲಿಲ್ಲ. ನನ್ನ ಭಕ್ತಿಯನ್ನು ನನ್ನ ಶೀಲವನ್ನು ಒಂದನ್ನೂ ಲೆಕ್ಕಿಸದೆ ಎಲ್ಲವನ್ನು ಹಿಂದಕ್ಕೆ ತಳ್ಳಿಹಾಕಿದ್ದಿಯೆ ಎಂದು ಕಣ್ಣೀರು ಹಾಕುತ್ತಾ ಗದ್ಗದ ಧ್ವನಿಯಿಂದ ಸೌಮಿತ್ರಿಗೆ 'ಈ ವ್ಯಸನಕ್ಕೆ ಔಷಧಿಯಾಗುವಂತೆ ನನಗೆ ಚಿತೆಯನ್ನು ಮಾಡಿಕೊಡು' ಎಂದು ಧೈರ್ಯಳಾಗಿ ಹೇಳಿದಳು.

ಊರ್ಮಿಳೇಶನು ಅಗ್ನಿಯನ್ನು ರಚಿಸಿದನು. ಸೀತೆ ರಾಮನ್ನು ಪ್ರದಕ್ಷಿಣೆ ಮಾಡಿ ಉರಿಯುತ್ತಿದ್ದ ಬೆಂಕಿಗೆ ಕೈ ಮುಗಿಯುತ್ತಾ ಪ್ರಾರ್ಥಿಸಿದಳು. 'ನನ್ನ ಮನಸ್ಸು ಸದಾಕಾಲದಲ್ಲೂ ರಾಮನನ್ನು ಬಿಟ್ಟು ಆಚೆಗೆ ಸರಿಯದಿದ್ದುದೇ ಆಗಿದಲ್ಲಿ ಲೋಕಸಾಕ್ಷಿಯಾದ ಅಗ್ನಿಯು ನನ್ನನ್ನು ಸುತ್ತಲೂ ರಕ್ಷಿಸಲಿ ರಾಮನು ದೋಷಯುಕ್ತಳಾಗಿ ತಿಳಿದಿರುವ ನಾನು ಶುದ್ಧಚಾರಿತ್ರಳಾಗಿರುವುದು ನಿಜವಾದರೆ ಲೋಕಸಾಕ್ಷಿಯಾದ ಅಗ್ನಿಯು ನನ್ನನ್ನು ರಕ್ಷಿಸಲಿ ಸಕಲಧರ್ಮಗಳನ್ನೂ ಬಲ್ಲವನಾದ ರಾಮನನ್ನು ನಾನು ಮನಸಾವಾಚ ಕರ್ಮಣಾ ಅತಿಕ್ರಮಿಸದೆ ಇದ್ದಲ್ಲಿ ನನ್ನನ್ನು ಅಗ್ನಿಯು ರಕ್ಷಿಸಲಿ ಭಗವಾನ್ ಆದಿತ್ಯನು, ವಾಯು, ದಿಕ್ಕುಗಳು, ಚಂದ್ರನು, ಅಹೋರಾತ್ರಿಗಳು, ಸಂಧ್ಯೆಗಳು, ಭೂಮಿ ಹಾಗೆಯೇ ನನ್ನನ್ನು ಸಚ್ಚರಿತ್ರಳು ಎಂದು ಇನ್ನೂ ಯಾರ್‍ಯಾರು ತಿಳಿದಿರುವರೋ ಅವರೆಲ್ಲರೂ ನನ್ನನ್ನು ರಕ್ಷಿಸಲು'[೧] ಎಂದು ಅಗ್ನಿಗೆ ಪ್ರದಕ್ಷಿಣೆ ಮಾಡಿ ಅಗ್ನಿಯನ್ನು ಪ್ರವೇಶಿಸಿದಳು.

ಅಂದು ಹನುಮನ ಬಾಲಕ್ಕೆ ಬೆಂಕಿಬಿದ್ದಾಗ ಶೀತಲವಾಗುವಂತೆ ಬೇಡಿದ್ದ ಸಾಧ್ವಿ ಸೀತೆಗೆ ತಣ್ಣಗಾಗಿದ್ದ ಅಗ್ನಿದೇವ ಇಂದು ಸೀತೆಗೆ ತಣ್ಣಗಾಗದೆ ಇರುವನೆ? ಸೀತೆಯ ಧರ್ಮಾಚರಣೆಯಿಂದ ರಾವಣನ ಬಂಧನದಿಂದ ಮುಕ್ತಿಗೊಂಡ ಅಗ್ನಿದೇವನು ಕೃತಜ್ಞನೊ, ಕೃತಘ್ನನೊ ಎಂದು ಪರೀಕ್ಷೆಗೆ ಒಳಗಾಗಬೇಕಾಗಿದೆ. ಇದರಲ್ಲಿ ಅಗ್ನಿ ಮತ್ತು ಸೀತೆ ಇಬ್ಬರು ಗೆದ್ದರು. ಅಗ್ನಿದೇವನು ಸಾಧ್ವೀ ಸೀತೆಯನ್ನು ರಾಮನಿಗೆ ಒಪ್ಪಿಸಿದನು. 'ಜಾನಕಿ ದೋಷಾತೀತಳು ಅವಳನ್ನು ಪರೀಕ್ಷಿಸದೆ ನಾನು ಸ್ವೀಕರಿಸಿದ್ದರೆ ದಶರಥನ ಮಗನಾದ ರಾಮನು ಅವಿವೇಕಿ. ಇವನೊಬ್ಬ ಕಾಮುಕ ಎಂದು ಮಹಾಜನತೆ ಹೇಳುತ್ತಿದ್ದರು. ನನ್ನಲ್ಲಿಯೇ ಇವಳ ಹೃದಯವು ನೆಲೆಸಿದೆ. ನನ್ನ ಇಚ್ಛೆಯಂತೆಯೇ ನಡೆಯತಕ್ಕವಳು ಎಂಬುದನ್ನು ನಾನು ಬಲ್ಲೆನು. ಆದರೂ ಸತ್ಯವನ್ನೆ ನಂಬಿರುವ ನಾನು ಸತ್ಯವೂ ಪ್ರಕಟವಾಗಲೆಂದು ಸುಮ್ಮನಿದ್ದೆನು. ರಾವಣನು ಮೈಥಿಲಿಯನ್ನು ಕೆಣಕಬಲ್ಲನೆಂದು ಮನಸ್ಸಿನಿಂದ ಊಹಿಸುವುದೂ ಶಕ್ಯವಲ್ಲ ಉರಿಯುವ ಅಗ್ನಿಜ್ವಾಲೆಯಲ್ಲವೇ ಇವಳು ಬಲತ್ಕಾರಕ್ಕೆ ಮಣಿಯತಕ್ಕವಳಲ್ಲವೆಂದು ನನಗೆ ಗೊತ್ತಿದೆ' ಎಂದು ರಾಮಸತಿಯನ್ನು ಸ್ವೀಕರಿಸಿದನು.

ಸಿದ್ಧಗೊಂಡ ಪುಷ್ಪಕವಿಮಾನದಲ್ಲಿ ರಾಮ ಲಕ್ಷ್ಮಣ ಸೀತೆ ವಾನರೊಡನೆ ಬಂದರು. ಸೀತೆಯು ವಾನರ ಸ್ತ್ರೀಯರನ್ನು ಕಿಷ್ಕಿಂದೆಯಿಂದ ಕರೆಯಿಸಿಕೊಂಡು ಅಯೋಧ್ಯಾದರ್ಶನ ಮಾಡಿದಳು. ಸೀತಾರಾಮರ ಪಟ್ಟಾಭಿಷೇಕವಾಯಿತು. ಶ್ರೀರಾಮನು ನೀಡಿದ ದಿವ್ಯರತ್ನವನ್ನು

---

[೧] ಯುದ್ಧಕಾಂಡ ಸರ್ಗ ೧೧೯.

ಹನುಮನು ಮಾಡಿದ ಸಹಾಯಕ್ಕೆ ಅವನ ಧೈರ್ಯಕ್ಕೆ ಮೆಚ್ಚಿ ನೀಡಿದಳು. ಎಲ್ಲರನ್ನು ಸಂತೋಷದಿಂದ ಸತ್ಕರಿಸಿ ಬೀಳ್ಕೊಟ್ಟರು.

* * * *

ಜನಕ ರಾಜನ ಮಗಳು ಭೂಜಾತೆ ಸುಕುಮಾರಿ, ಸರ್ವಾಂಗಸುಂದರಿ ಕುಸುಮ ಕೋಮಲೆಯಾಗಿ ರಾಮಾಯಣದಲ್ಲಿ ಕಂಡಬಂದರೂ ಕೆಲವು ಸಂದರ್ಭಗಳಲ್ಲಿ ಬಿರುನುಡಿಗಳನ್ನು ಕಟುನುಡಿಗಳನ್ನು ಸೂಸುವ ಅಗ್ನಿಯಂತೆಯೂ ಗೋಚರಿಸುತ್ತಾಳೆ. ಕಾವ್ಯದ ಆರಂಭದಲ್ಲಿ ರಾಮನು ತನ್ನೊಡನೆ ವನವಾಸಕ್ಕೆ ಬರುವುದು ಬೇಡ ಎಂದು ಹೇಳಿದಾಗ ಕೆಂಡಮಂಡಲವಾಗಿ ಪುರುಷರೂಪದ ಸ್ತ್ರೀಗೆ ತನ್ನನ್ನು ಮದುವೆಮಾಡಿ ಕೊಟ್ಟನಲ್ಲಾ ನನ್ನ ತಂದೆ ಎಂದು ಹೇಳುವುದಕ್ಕೂ ಆಕೆ ಹಿಂಜರಿಯುವುದಿಲ್ಲ. ಈ ಮಾತಿನ ಹಿಂದಿನ ಉದ್ದೇಶ ಪ್ರೀತಿಯೇ ಆದರೂ ಆ ಕ್ಷಣದಲ್ಲಿ ಆಕೆ ತೋರಿದ ದಿಟ್ಟತನ ಮೆಚ್ಚುವಂತದ್ದು. ಇಂಥದ್ದೆ ಇನ್ನೊಂದು ಸಂದರ್ಭ ರಾಮ ಮಾಯಾಮೃಗ ಬೇಟೆಗೆ ತೆರಳಿದಾಗ ಅವನಿಗೆ ಅಪಾಯ ಸಂಭವಿಸಿರಬಹುದೆಂದು ತಿಳಿದ ಸೀತೆ ಲಕ್ಷ್ಮಣನಿಗೆ 'ನೀನು ನನಗೋಸ್ಕರವೇ ವನವಾಸಕ್ಕೆ ಬಂದಿರುವುದು' ಎಂದು ಮಾತಿನ ಛಡಿ ಏಟನ್ನು ಕೊಡುವ ಸಂದರ್ಭ. ಆದರೆ ಲಕ್ಷ್ಮಣನ ಬಗ್ಗೆ ಆಕೆಗೆ ಕೊಂಚವಾದರೂ ಅನುಮಾನವಿಲ್ಲ ಎಂಬುದು ಮಾತ್ರ ದಿಟ. ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋಗುವಾಗ ಆಕೆ ಮೊದಲು ಕೂಗಿದ್ದು ಲಕ್ಷ್ಮಣನನ್ನು, ಹನುಮನು ಪತಿಯ ಸಂದೇಶವನ್ನು ತಂದಾಗ ಅವಳು ಲಕ್ಷ್ಮಣನನ್ನು ಬಹಳವಾಗಿ ಪ್ರಶಂಸಿಸುತ್ತಾಳೆ. ರಾಮನು ತನ್ನನ್ನು ಅವಮಾನಪಡಿಸಿದಾಗ ಅವಳು 'ಚಿತಾಂ ಮೇ ಕುರು ಸೌಮಿತ್ರೀ' ಎಂದು ಚಿತೆಮಾಡುವಂತೆ ಹೇಳುತ್ತಾಳೆ. ಅಷ್ಟೇ ಅಲ್ಲ ತ್ರಿಲೋಕ ಚಕ್ರವರ್ತಿಯಾಗಿ ಇಂದ್ರಾದಿಗಳನ್ನು ಲಕ್ಷಿಸದೆ ರಾವಣನನ್ನು ತಿರಸ್ಕರಿಸಿ, ಅವನ ಸ್ಥಾನದಲ್ಲಿಯೇ ಅವನ ಕಣ್ಗಾವಲಲ್ಲೆ ಇದ್ದರೂ ಅವನನ್ನು ಧಿಕ್ಕರಿಸಿ ಮಾತನಾಡಬೇಕಾದರೆ ಅವಳು ಅದೆಂತಹ ಧೀರೆಯಾಗಿರಬೇಕು.

ಅನೇಕ ಸಂದರ್ಭಗಳಲ್ಲಿ ಸ್ತ್ರೀ ಸಹಜವಾದ ಸ್ವಭಾವವನ್ನು ಕಾಣಬಹುದು. ತನ್ನ ಮಗನ ವಿಷಯದಲ್ಲಿ ಗೌರವದಿಂದ ನಡೆದುಕೊ ಎಂದು ಕೌಸಲ್ಯೆ ತನಗೆ ಹೇಳಿದಾಗ ಸೀತೆ ನಮ್ರಳಾಗಿ ಒಪ್ಪಿಕೊಳ್ಳುತ್ತಾಳೆ. ಅನಸೂಯದೇವಿ ತನ್ನ ಕಥೆಯನ್ನು ಕೇಳಿದಾಗ ಈ ತರುಣ ಸತಿ ಹಿರಿಯರಲ್ಲಿ ಕಿರಿಯರು ಭಿನ್ನವಿಸಿಕೊಳ್ಳುವ ಹಾಗೆ ತನ್ನ ಬಾಲ್ಯದ ವೃತ್ತಾಂತವನ್ನು, ವಿವಾಹದ ವಿಷಯವನ್ನು ಸರಳತೆಯಿಂದ, ಸಂತೋಷದಿಂದ, ಹೆಮ್ಮೆಯಿಂದ ಅರಿಕೆ ಮಾಡಿದಳು. ಅನಸೂಯೆ ಪತಿವ್ರತೆಯ ಧರ್ಮವನ್ನು ಉಪದೇಶ ಮಾಡಲು ಹಿಂದೆ ಅತ್ತೆಯ ಮಾತನ್ನು ಅಂಗೀಕರಿಸುವಂತೆ ನಮ್ರಳಾಗಿ ಸ್ವೀಕರಿಸುತ್ತಾಳೆ. ರಾವಣನು ಸೀತೆಯನ್ನು ಕದ್ದಾಗ ಆಕೆ ಇಡೀ ಗಿರಿ, ವನ, ಜಲ, ಪ್ರಾಣಿ, ಪಕ್ಷಿ ಮುಂತಾದವುಗಳಿಗೆ ಶರಣು ಹಾಕಿದ ರೀತಿ ಹೆಣ್ಣಿನದು. ರಾವಣನಿಗೆ ಆಕೆ ಹೇಳುವ ಎಲ್ಲ ಮಾತುಗಳು ಅವನ ವಿಷಯದಲ್ಲಿ ನಡೆದ ಎಲ್ಲ ನಡೆಯೂ ಹೆಣ್ಣಿನ ಸ್ವಭಾವಕ್ಕೆ ಸಹಜವಾದುದು. ಕೊನೆಗೆ ಅಗ್ನಿ ಪ್ರವೇಶ ಮಾಡಿ ಬಂದು ಕೈಕಾಚಿದ ರಾಮನಿಗೆ ಒಲಿಯುವ ಇವಳು ಕ್ಷಮಯಾಧರಿತ್ರೀ ಕೂಡ ಆಗುತ್ತಾಳೆ. ಈ ಕ್ಷಮಾಗುಣದಿಂದ ಸೀತಾದೇವಿ ಸ್ತ್ರೀಕುಲದ ಮೌಳಿಮಣಿಯಾದಳು. ಲಂಕೆಯನ್ನು ಬಿಟ್ಟು ಅಯೋಧ್ಯೆಗೆ ಬರುತ್ತ

ರಾಮನು ಕಿಷ್ಕಿಂದೆಯನ್ನು ತೋರಿಸಲು ಸೀತೆ ಸುಗ್ರೀವನ ಸಂಸಾರವನ್ನು ನೋಡಬೇಕೆಂದೂ ಅವರನ್ನು ಅಯೋಧ್ಯೆಗೆ ಕರೆದುಕೊಂಡು ಹೋಗಬೇಕೆಂದು ಅಪೇಕ್ಷಿಸುವುದು ಇವಳು ಎಷ್ಟು ಸ್ನೇಹಪರಳೆಂದು ತೋರುತ್ತದೆ. ಈ ಸ್ನೇಹಪರತೆ ಸಂತೋಷದ ತುತ್ತತುದಿಯನ್ನು ಮುಟ್ಟಿದಾಗಲೂ ಬಿಡುವುದಿಲ್ಲ. ಪತಿಯೊಡನೆ ಅಭಿಷಿಕ್ತಳಾದ ಸಂದರ್ಭದಲ್ಲಿ ರಾಮನು ಕೊಟ್ಟ ಪ್ರೀತಿಯ ರತ್ನಾಭರಣವನ್ನು ಹನುಮಂತನಿಗೆ ಕೊಡುತ್ತಾಳೆ. ತಾನು ಅಶೋಕವನದಲ್ಲಿ ಶೋಕಿಸುತ್ತಾ ಕುಳಿತಿರುವಾಗ ಬಂದ ಹನುಮ ಅವಳ ಪಾಲಿಗೆ ಬಿಡುಗಡೆಯ ಜ್ಯೋತಿಯಾಗಿ ಕಾಣಿಸುತ್ತಾನೆ. ಅದುವರೆಗೂ ಕವಿದಿದ್ದ ಕಾರ್ಮೋಡ ಅವನ ಬರುವಿಕೆಯಿಂದ ಸರಿಯಿತು. ಹನುಮನು ಸೀತೆಯನ್ನು ಕಂಡು ಇವಳ ವಿಚಾರವನ್ನು ರಾಮನಿಗೆ ತಿಳಿಸುವುದಕ್ಕೆ ಹೊರಟಾಗ ಆಕೆ ಒಂದು ದಿನ ಇಲ್ಲೆ ಇದ್ದು ಹೋಗುವಂತೆ ಕೇಳುತ್ತಾಳೆ. ರಾಕ್ಷಸನಿಂದ ಆದಷ್ಟು ಬೇಗ ಈ ಕ್ಷಣದಲ್ಲಿಯೇ ಪಾರಾಗಬೇಕು ಎಂದು ಹಂಬಲಿಸುತ್ತಿದ್ದ ಸೀತೆ ಒಂದು ದಿನ ವಿಳಂಬವನ್ನು ತಾನೇ ಬೇಡುತ್ತಾಳೆ. ಇದರಿಂದ ಹನುಮನು ಸೀತೆಯ ಮನಸ್ಸಿಗೆ ಎಷ್ಟು ಹಿತವಾಗಿ ಕಂಡನೆಂಬುದನ್ನು ಊಹಿಸಬಹುದು.

ಸಹಜ ಸ್ತ್ರೀಯಾಗಿ ಗೋಚರಿಸುವ ಹಾಗೆ ಆಕೆ ರಾಮಪತ್ನಿಯಾಗಿಯು ಕಾಣುತ್ತಾಳೆ. ಅನಸೂಯೆಯೊಡನೆ ಮಾತನಾಡುವಾಗಲೂ ಆಕೆ ರಾಮಪತ್ನಿ, ಸನ್ಯಾಸಿಯಾಗಿ ವೇಷವನ್ನು ಮರೆಸಿಕೊಂಡು ಬಂದ ರಾವಣನೊಡನೆ ಮಾತನಾಡುವಾಗಲೂ ಆಕೆ ರಾಮಪತ್ನಿ, ಅಶೋಕವನದಲ್ಲಿ ಆಂಜನೇಯನೊಡನೆ ಮಾತನಾಡುವಾಗ ರಾಮಪತ್ನಿ, ಯುದ್ಧವು ನಡೆಯುತ್ತಿರುವಾಗ ಮೂರ್ಛೆ ಬಿದ್ದಿರುವ ರಾಮಲಕ್ಷ್ಮಣರನ್ನು ನೋಡಿ ಪ್ರಲಾಪಿಸುವಾಗಲೂ ರಾಮಪತ್ನಿಯೇ ಯುದ್ಧವೆಲ್ಲ ಮುಗಿದ ಮೇಲೆ ರಾಮನ ಮುಂದೆ ನಿಂತಿರುವ ತಪಸ್ವಿನಿಯೂ ರಾಮಪತ್ನಿಯೇ ಹೀಗೆ ವಾಲ್ಮೀಕಿ ಸರ್ವವಿಧದಲ್ಲೂ ರಾಮಪತ್ನಿಯನ್ನೆ ಚಿತ್ರಿಸಿರುವಂತೆ ಗೋಚರಿಸಿ ಬಿಡುತ್ತದೆ. ಒಟ್ಟಿನಲ್ಲಿ ಸಹನೆ, ಕ್ಷಮಾಗುಣ, ವಿವೇಕ, ಧೈರ್ಯ, ಪತಿಭಕ್ತಿ ಮುಂತಾದ ಮಹಾಗುಣಗಳಿಂದ ಶೋಭಿಸುವ ಸೀತೆ ಭಾರತೀಯ ಸಂಸ್ಕೃತಿ ಇರುವವರೆಗೂ ಅಮರವಾಗಿರುವ ಆದರ್ಶ ಮಹಿಳೆ.



# ಅಧ್ಯಾಯ ೩

## 'ರಾಮಾಯಣ ದರ್ಶನಂ ಮಹಾಕಾವ್ಯದಲ್ಲಿ ಸೀತೆ'

'ವಾಲ್ಮೀಕಿಯುಲಿದ ಕಥೆಯಾದೊಡಂ ಕನ್ನಡದಿ ಬೇರೆ ಕಥೆಯೆಂಬಂತೆ ರೂಪಿಸುವುದಾಗಿ ಹೇಳಿದ ಕುವೆಂಪು ತಮ್ಮ ದಾರ್ಶನಿಕ ದೃಷ್ಟಿಯಿಂದ 'ಬೇರೆ ಮೈಯಾಂತಂತೆ' ಪ್ರತಿಯೊಂದು ಪಾತ್ರವನ್ನು ರೂಪಿಸುತ್ತಾರೆ. ವಾಲ್ಮೀಕಿಯ ಕೈಯಲ್ಲಿ ಉಜ್ವಲವಾಗಿ ಬೆಳಗಿನ ಸೀತೆ ಮತ್ತೊಬ್ಬ ಕಬ್ಬಿಗನ ಕೈಯಲ್ಲಿ ಮರುಹುಟ್ಟು ಪಡೆಯುವಾಗ ಮುಕ್ಕಾಗಿ ಬಿಡುವ ಸಂಭವವೇ ಹೆಚ್ಚು. ಅಷ್ಟೇ ಅಲ್ಲ ಸೀತೆ ಭಾರತೀಯರಲ್ಲಿ ಭಾವನಾತ್ಮಕವಾಗಿ ಬೆರೆತು ಹೋಗಿರುವುದರಿಂದ ಮತ್ತೂ ಉಜ್ವಲಗೊಳಿಸಬೇಕಾದ ಹೊಣೆಗಾರಿಕೆ ಮತ್ತೆ ಚಿತ್ರಿಸಹೊರಟ ಕವಿಯ ಮೇಲಿರುತ್ತದೆ. 'ಮೂಲದಲ್ಲಿಯೇ ಪರಮ ಸುಂದರವೂ ಪರಿಪೂರ್ಣ ವಿಕಸಿತವೂ ಸತ್ವ ಸಂಪನ್ನವೂ ಆಗಿರುವ ಈ ಪಾತ್ರವನ್ನು ಮತ್ತೊಮ್ಮೆ ಸ್ಪರ್ಶಿಸುವುದು ಕೂಡ ಅಗಾಧ ಜವಾಬ್ದಾರಿಯ ಮಹತ್ತರ ಸಾಹಸದ ಕಾರ್ಯ. ಸಾಮಾನ್ಯ ಪ್ರತಿಭೆ ಇದನ್ನು ಸೋಂಕಿದರೂ ಸಾಕು ಇದರ ಸೌಂದರ್ಯ, ಸೌಕುಮಾರ್ಯ, ಸುಸೂಕ್ಷ್ಮತೆ ಸಜೀವತೆಗಳು ಮುಕ್ಕಾಗುವ ಸಂಭವವೇ ಅಧಿಕ ಆದರೂ ಮೂಲ ಮಹಾಕವಿಯ ಪಾತ್ರಗಳನ್ನೆಲ್ಲ ತಮ್ಮ ನೂತನ ಕೃತಿಯಲ್ಲಿ ಹೊಸ ಎತ್ತರ ಬಿತ್ತರಗಿಗೆ ಬೆಳೆಸಿದ ಕುವೆಂಪು ಸೀತೆಯ ಪಾತ್ರದ ಅನುಪಮ ಕಲಾಕೌಶಲವನ್ನು ಮತ್ತಷ್ಟು ಸಂವರ್ಧಿಸುವ ವ್ಯಕ್ತಿತ್ವಕ್ಕೆ ಮತ್ತೊಂದು ನೂತನ ಆಯಾಮವನ್ನು ಸಹಜೋಜ್ವಲವಾಗಿ ಕಲ್ಪಿಸುವ ಆ ಮೂಲಕ ಮೂಲ ಮೂರ್ತಿಯ ಶೋಭೆಗೆ ಕುಂದಾಗದಂತೆ ಮತ್ತಷ್ಟು ವ್ಯಾಪಕವೂ ಗಾಢವೂ ಆದ ಪ್ರಜ್ವಲ ಪರಿಣಾಮವನ್ನುಂಟು ಮಾಡುವ ಮಹಾಸಾಹಸ ಪ್ರತಿಭೆಗಳನ್ನು ಮೆರೆದಿದ್ದಾರೆ''[೧]

ಕುವೆಂಪು ಮಹಾಕಾವ್ಯದಲ್ಲಿ ಜಾನಕಿ ಕಾಣಿಸಿಕೊಳ್ಳುವುದು ಉದ್ಯಾನವನದಲ್ಲಿ. ವಾಲ್ಮೀಕಿ ಕಾವ್ಯದಲ್ಲಿಯಂತೆ ಇಲ್ಲೂ ಸಹ ಸೀತೆಯ ಜನನದ ಬಗ್ಗೆ ದೀರ್ಘ ಪ್ರಸ್ತಾಪವಿಲ್ಲ. ಜನಕರಾಜನ ಬಾಯಿಂದ ಉಲ್ಲೇಖಿಸುತ್ತಾರೆ. ತನ್ನ ಮಗಳ ಮದುವೆಯ ಚಿಂತೆಯಲ್ಲಿದ್ದ ತಂದೆ ಕೌಶಿಕಮುನಿಗೆ ತನ್ನ ಮಗಳ ಪರಿಚಯುವನ್ನು ಮಾಡುತ್ತಾನೆ.

ಯಜ್ಞಾರ್ಥಮೊರ್ಮೆ ನಾಂ ನೆಲನನುಳುತಿರಲ್ಲಿ
ಕುಳದ ನೇಗಿಲ್‌ಗೆರೆಯ ಬೈತಲೆಯ ಬಟ್ಟೆಯೊಳ್
ರನ್ನದೊಟ್ಟಲೊಳಿರ್ದ ಶಿಶುರತ್ನಮಂ ಕೊಂಡು
ಪೆಣ್ಗೂಸದಂ ಮಗಳ್‌ಗೆತ್ತು ಸಲಹಿದೆನೊಲಿದು
ಸೀತೆಯೆಂಬಭಿಧಾನಮಂ ಪ್ರೀತಿಯಿಂ ತೊಡಿಸಿ[೨]

ಸೀತೆ ಜನಕರಾಜನಿಗೆ ನೇಗಿಲ ಗೆರೆಯಲ್ಲಿ ಸಿಕ್ಕಿದರೂ ಆಕೆ ಪ್ರಕೃತಿರೂಪಿಣಿ ಚೈತ್ಯಸಂಪ್ರಜ್ಞೆ ಎಂಬುದು ದಿಟ ಕಾವ್ಯದ ಆರಂಭವೇ ಇದನ್ನು ಸ್ಪಷ್ಟಪಡಿಸುತ್ತದೆ.

---

[೧] ಶ್ರೀ ರಾಮಾಯಣದರ್ಶನಂ ಒಂದು ವಿಮರ್ಶಾತ್ಮಕ ಅಧ್ಯಯನ–ಡಾ. ಹೆಚ್.ಜೆ.ಲಕ್ಕಪ್ಪಗೌಡ. ಪುಟ ೨೬೬

[೨] ಶ್ರೀ ರಾಮಾಯಣದರ್ಶನಂ 'ಶಿಲಾತಪಸ್ವಿನಿ' ಪುಟ ೪೩, ಸಾಲು ೩೬೩–೬೩

ಶ್ರೀರಾಮನಾ ಲೋಕದಿಂದವತರಿಸಿ ಬಂದು
ಈ ಲೋಕಸಂಭವೆಯನೆಮ್ಮ ಭೂಜಾತೆಯಂ
ಸೀತೆಯಂ ವರಿಸುತಾಕೆಯ ನೆವದಿ ಮೃಚ್ಛಕ್ತಿಯಂ
ಮರ್ದಿಸುತೆ, ಸಂವರ್ಧಿಸಿರ್ಪವೋಲ್ ಚಿಚ್ಛಕ್ತಿಯಂ[೧]

ಸೀತಾರಾಮರ ಸಂಬಂಧ ಕೇವಲ ಆಕಸ್ಮಿಕವಾಗಿ ಫಲಿಸಿದ ಲೌಕಿಕ ಸಂಬಂಧವಿಲ್ಲ. ಅದರ ಹಿನ್ನೆಲೆ ಅತ್ಯಂತ ನಿಗೂಢವೂ ಆಳವೂ ವ್ಯಾಪಕವೂ ಆದದ್ದು ಎಂಬುದನ್ನು ಕುವೆಂಪು ಆರಂಭದಿಂದಲೂ ಸೂಕ್ಷ್ಮವಾಗಿ ಸಾಂದರ್ಭಿಕವಾಗಿ ಧ್ವನಿಸುತ್ತಾ ಹೋಗುತ್ತಾರೆ. 'ಜಡಕ್ಕೆ ಬಂಧಿಸಲ್ಪಟ್ಟಿರುವ ಚೇತನದ ಪ್ರತಿಮೆಯಾದ ಸೀತೆಯು ಚಿಚ್ಛಕ್ತಿಯ ಇನ್ನೊಂದು ಮುಖ. ಅದೇ ಚಿಚ್ಛಕ್ತಿಯ ಇನ್ನೊಂದು ಮುಖ ರಾಮ ಶುದ್ಧ ಬ್ರಹ್ಮ ಪರಾತ್ಪರ ಶಕ್ತಿಯು ಕ್ರಿಯಾತ್ಮಕ ಸ್ವರೂಪ ಹೊಂದಿದರ ಪ್ರಕೃತಿಯಾಗುತ್ತದೆ. ಅದೇ ನಿಷ್ಕ್ರಿಯಾತ್ಮಕ ಪ್ರಭುವಾದರೆ ಪುರುಷನಾಗುತ್ತದೆ. ಸೀತೆ ಪ್ರಕೃತಿ ಸ್ವರೂಪಿಣಿ. ಶ್ರೀರಾಮ ಪುರುಷರೂಪಿ; ಪ್ರಕೃತಿ ಪುರುಷನೊಡನೆ ಒಂದಾಗಲು ಮಾಡುವ ಪ್ರಯತ್ನವೇ ಸಾಧನೆ'[೨] ಎಂಬುದನ್ನು ಕೋ ಚೆನ್ನ ಬಸಪ್ಪ ಅವರು ಗುರುತಿಸುತ್ತಾರೆ.

ರಾಮಲಕ್ಷ್ಮಣರು ವಿಶ್ವಾಮಿತ್ರಮುನಿಯ ಯಾಗವನ್ನು ನಿರ್ವಿಘ್ನವಾಗಿ ಪೂರೈಸಿದ ಬಳಿಕ ಜನಕರಾಜನ ಮಹಾಯಾಗದ ಸುಕೃತವಾರ್ತೆ ಬರುತ್ತದೆ. ಆತನ ಬಳಿಯಿದ್ದ ಹರಧನುವಿನ ಹಿನ್ನಲೆಯನ್ನು ಮಹರ್ಷಿ ಬಿತ್ತರಿಸಿದ ಕೂಡಲೇ ಶಿವಶಕ್ತಿ ಸಂಚರಿಸಿದಂತೆ ರಾಮ ಪುಳಕಗೊಳ್ಳುತ್ತಾನೆ.

. . . ತನ್ನ ಹೃದಯೇಶ್ವರಿಯನ್ನು
ಕಾಪುರುಷರಿಂ ಪೊರೆವ ಹರಕೃಪಾ ರೂಪಿಯೇಂ
ಚಾಪಮಾತ್ರಮೆ ಪೇಳ್? ಶಿವೇಚ್ಛಾ ಪ್ರಾಣಾಲಿಯೆ ದಿಟಂ[೩]

ರಾಮ ಸೀತೆಯರ ಸಂಬಂಧ ಸಾಂಪ್ರದಾಯಿಕವಾದ ಪ್ರಾಕೃತಿಕವಾದ ವರ್ತಮಾನ ಸಂಬಂಧವಿಲ್ಲ. ಅದು ಗೂಢವಾದದ್ದು ಅನಾದಿಯಾದದ್ದು, ಅಪ್ರಕೃತವಾದದ್ದು ಗಹನೋದ್ದೇಶಭರತವಾದದ್ದು ಎಂಬುದನ್ನು ಇದು ಸೂಚಿಸುತ್ತದೆ.

ಶಿವಧನುರ್ಭಂಗಕ್ಕೆ ಮೊದಲೇ ಊರ್ಮಿಳಾ ಜೊತೆಗೂಡಿ ಹೂದೋಟಕ್ಕೆ ಹೋಗಿದ್ದ ಸೀತೆ ರಾಮನನ್ನು ಕಂಡು ಮೋಹಗೊಳ್ಳುತ್ತಾಳೆ. ಆಶ್ಚರ್ಯಗೊಳ್ಳುತ್ತಾಳೆ. ಸೀತೆಯ ಎಲ್ಲ ದುಗುಡ, ಆವೇಶಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿದ್ದ ಊರ್ಮಿಳೆ ಕಾರಣವನ್ನು ಕೇಳಿದಾಗ ಆಕೆ ಕೊಡುವ ಉತ್ತರ ಸೀತೆ ಸಾಮಾನ್ಯ ಸ್ತ್ರೀಯಲ್ಲ ಆಕೆ ಸಾಕ್ಷಾತ್ ಪ್ರಕೃತಿ ಸ್ವರೂಪಿಣಿ ಎನ್ನುವುದನ್ನು ಧ್ವನಿಸುತ್ತದೆ.

---

೧ ಅದೇ, ಶ್ರೀ ವೆಂಕಣ್ಣಯ್ಯನವರಿಗೆ ಪುಟ ೧೬, ಸಾಲು ೩೮-೪೧.

೨ ಕೋ.ಚೆನ್ನಬಸಪ್ಪ : ಗಂಗೋತ್ರಿ ಪುಟ ೨೩೨.

೩ ಅದೇ, 'ಶಿಲಾತಪಸ್ವಿನಿ' ಪುಟ ೩೬, ಸಾಲು ೨೦೨-೦೪.

ತಂಗಿ, ನಾನಿನ್ನೆಗಂ
ಪೇಳ್ವೆನಿಲ್ಲೊಂದಾತ್ಮವಿಷಯಮಂ, ಬಾಲ್ಯದಿಂ, ಕೇಳ್
ನನಗರ್ಥವಾಗದೊಂದನುಭವಂ ತಾಂ ನಿಚ್ಚಮಂ
ಬಂದೆನ್ನನೊಳಕೊಳ್ವುದವ್; ಗಗನ ಮಂಡಲಮೆ
ಬಂದೆನ್ನ ಮೆಯ್ಯುಮುತೆರ್ದೆಯೊಳಗೆ ಸೇರ್ವಂತೆ;
ಕಡಲುಕ್ಕಿ ಮೇರೆ ಮೀರುತೆ ಪಾಯ್ದು ಮುಳುಗಿಸಲ್
ನಾನೆ ಕಡಲೊಡತಿಯಪ್ಪಂತೆ: ಪೃಥಿವಿಯೆ ಕರಗಿ
ಪೆಣೆಪಸುಳೆಯಾಗುತೆನ್ನಯ ತೊಡೆಯ ತೊಟ್ಟಿಲೊಳ್
ನಲಿವಂತೆ; ತೊರೆ ಬನಂ ಭೂಮಿ ಬಾನ್ ಗಿರಿಪಂಕ್ತಿ
ಪಗಲಿರುಳ ಚುಕ್ಕಿ ತಿಂಗಳ ನೇಸರೆಲ್ಲಮುಂ
ಮೆಯ್ಯಾಗುತಾಂ ತ್ರೈಭುವನ ಲಕ್ಷ್ಮಿಯಪ್ಪಂತೆ
ಬೆದರಿದೆನ್ ಮೊದ ಮೊದಲ್ ಪೇಳಲೆಂದೆಳಸಿದರೆ
ತೊದಲಾಯ್ತು ಮೂಗಿ ಕಂಡದ್ಭುತದ ವೋಲಾಯ್ತು . . . [೧]

ಅಷ್ಟೇ ಅಲ್ಲ ರಾವಣ ಹರಧನುಸ್ಸನ್ನು ಮುರಿಯಲು ಬಂದ ರಾತ್ರಿ ನೀಲ ಮೇಘ ಶ್ಯಾಮಮೂರ್ತಿಯೊಂದು ಆಕೆಗೆ ಗೋಚರಿಸುತ್ತದೆ. ಉದ್ಯಾನವನದಲ್ಲಿ ಕಂಡ ರಾಮನಲ್ಲಿ ಆ ಮೂರ್ತಿಯನ್ನು ಗುರುತಿಸುತ್ತಾಳೆ. ಇದರಿಂದಾಗಿ ಸೀತಾರಾಮರ ಸಂಬಂಧ ಲೌಕಿಕವಾಗಿದ್ದರೂ ಲೌಕಿಕವನ್ನು ಮೀರಿದ್ದು ಎಂಬುದು ಸ್ಪಷ್ಟವಾಗುತ್ತದೆ. ರಾವಣ ಬಂದಾಗ ಅವನಿಂದ ರಕ್ಷಿಸುವಂತೆ ಪಾರ್ವತಿ ಪತಿಯನ್ನು ಬೇಡಿದವಳು ರಾಮನಿಗಾಗಿ ವ್ರತವನ್ನು ಕೈಗೊಳ್ಳುತ್ತಾಳೆ.

. . . . ರಾಮನ ಬಲಕೆ ತನ್ನ
ಪ್ರೇಮದ ಬಲವನೀಯಲೆಂದು ನೋಂಪಿಯ ನೋಂತು
ಹೃತ್‌ಪದ್ಮದಿಂದ ಭೂಜಾತೆ ಗಿರಿಜೇಶನಂ
ಪೂಜಿಸಿದಳಾ ರಾತ್ರಿ, ನಿದ್ದೆ ನೈವೇದ್ಯಮಂ
ನೀಡಿ[೨]

ವಾಸ್ತವವಾಗಿ ಸೀತೆಯ ತಪಸ್ಸು ಇಲ್ಲಿಂದಲೇ ಆರಂಭವಾಗುತ್ತದೆ. ರಾಮನ ಮುಂದಿನ ಎಲ್ಲ ಸಾಧನೆಗಳಿಗೂ ಸೀತೆ ಜೀವಶಕ್ತಿಯಾಗುತ್ತಾಳೆ. ಈ ಆರಂಭವೇ ಸೀತೆಯ ಪ್ರಾಮುಖ್ಯತೆಗೆ ಅವಳ ಅನನ್ಯ ವೈಶಿಷ್ಟ್ಯಕ್ಕೆ ಸಾಕ್ಷಿಯಾಗುತ್ತದೆ.

ದಶರಥನ ಹಿರಿಯ ಮಗ, ಹಿರಿಯ ಸೊಸೆಯಾದ ಈ ದಂಪತಿಗಳು ಸುಖಿಗಳಾಗಿದ್ದುದು ಕೇವಲ ಅರಮನೆಯಲ್ಲಿದ್ದ ಹನ್ನೆರಡು ವರ್ಷಗಳು ಮಾತ್ರ. ಮುಂದೆ ಅವರು ಲೌಕಿಕ ಸುಖವನ್ನೇ ಕಾಣಲಿಲ್ಲ ಎಂಬ ಮಾತಿದೆ. ಅರಮನೆಯಲ್ಲಿ ಇವರು ಸುಖಿಗಳಾಗಿದ್ದರೂ ಎಂಬುದರಲ್ಲಿ

---

[೧] ಅದೇ ಪುಟ ೪೬, ಸಾಲು ೪೩೦-೪೪೨
[೨] ಅದೇ ಪುಟ ೪೬, ಸಾಲು ೪೮೧-೮೫

ಸಂಶಯವಿಲ್ಲ. ರಾಮನ ಗುಣಾತಿಶಯಗಳ ವರ್ಣನೆಗೆ ಮಾತ್ರ ಒತ್ತುಕೊಟ್ಟ ವಾಲ್ಮೀಕಿ ಇವರ ದಾಂಪತ್ಯ ಜೀವನದ ವಿವರಗಳ ಬಗ್ಗೆ ಮೌನವಹಿಸಿ ಬಿಡುತ್ತಾರೆ. ಆದರೆ ಕುವೆಂಪು ಸಂಕ್ಷಿಪ್ತವಾಗಿಯಾದರೂ ಉಜ್ವಲವಾಗಿ ಸೀತಾರಾಮರ ನವದಾಂಪತ್ಯವನ್ನು ಚಿತ್ರಿಸುತ್ತಾರೆ. ಕಣ್ಗಳೆರಡಾದರೂ ದೃಷ್ಟಿ ಒಂದೆ ಎಂಬಂತೆ ದೇಹಗಳು ಎರಡಾದರೂ ಬಾಳ್ವೆ ಒಂದೆಂಬಂತೆ ಅವರಿಬ್ಬರ ಮೈಮನಗಳೆರಡೂ ಹೀಗೆ ಅವಿಭಾಜ್ಯವಾಗಿ ಆದರ್ಶವಾಗಿ ಅನ್ಯಾದೃಶ್ಯವಾಗಿ ಬೆರೆತುಕೊಂಡು ಒಂದೇ ಆಗಿದ್ದವೆಂಬುದನ್ನು ಧ್ವನಿಸಿ ಮುಂದಿನ ಅವರ ಚಾರಿತ್ರ್ಯ ಸೌಧಕ್ಕೆ ಭದ್ರಬುನಾದಿಯನ್ನು ನಿರ್ಮಿಸುತ್ತಾರೆ.

ತಿಂಗಳ್ಗೆ ತೇನೆಯೊಲಿವಂತೆ ಸೀತಾಕಾಂತೆ
ತೇಲಾಡಿದಳು ತನ್ನ ರಮಣನಾನಂದಕ್ಕೆ
ತನ್ನೆಲ್ಲಮಂ ನಲಿದು ನೈವೇದ್ಯಮಂ ನೀಡಿ
ತನ್ನತನವನೆ ಸೊನ್ನೆ ಮಾಡಿ ತಾನೊಲಿದಂಗೆ
ಪ್ರಾಣೇಶ್ವರಂಗಿಷ್ಟಮೂರ್ತಿಗಾದರ್ಶಕ್ಕೆ ಪೇಳ್
ಪ್ರಾಣಾರ್ಪಣಂ ಗೈವ ಸೊಗದಿಂ ಮಿಗಿಲ್ ಸೊಗಂ
ತಾನೊಳದೆ? ಪೋ! ಸಗ್ಗಕೇಂ ಕೋಡುಂಟೆ ಬೇರೆ?
ಶ್ರೀರಾಮ ಪ್ರೇಮದೊಳೆ ಕಂಡಳ್ ಜನಕಜಾತೆ
ಜೀವನದ ಪರಮ ಪುರುಷಾರ್ಥಮಂ, ಮೇಣಖಿಳ
ಸೃಷ್ಟಿಲೀಲಾ ಮಹೋದ್ದೇಶಮಂ[೧]

ಶ್ರೀರಾಮಪ್ರೇಮ ಅವಳ ವ್ಯಷ್ಟಿ ಜೀವನದ ಪರಮ ಸಂತೃಪ್ತಿಯ ಪರಮಸಿದ್ಧಿ ಮಾತ್ರ ಎಂದು ಅವಳು ತಿಳಿಯಲಿಲ್ಲ; ಆ ಪ್ರೇಮ ಅವ್ಯಾಪ್ತವಾಗಿ ಕೇವಲ ವ್ಯಕ್ತಿನಿಷ್ಟವಾಗಿರದೆ ಸೃಷ್ಟಿಲೀಲೆಯ ಮಹೋದ್ದೇಶವನ್ನು ಪೂರೈಸುವ ಪರಮವಿಸ್ತಾರವೂ ಉನ್ನತವೂ ಉದ್ಧಾರಕವೂ ಆದ ದಿವ್ಯ ಮಂಗಳ ಪ್ರೇಮವೆಂಬುದನ್ನು ಅವಳು ಅರಿತಿದ್ದಳು. ಅಲ್ಲದೆ ಇವರಿಬ್ಬರ ನಡುವೆ ಪ್ರಥಮ ಮಿಲನದ ದಿನಗಳ ಪ್ರಣಯಕಾತರತೆಯ ಆವೇಶ ಆವೇಗಗಳಷ್ಟೇ ಕೆಲಸ ಮಾಡುವುದಿಲ್ಲ. ಪರಿಶುದ್ಧ ಒಲವು, ಆರಾಧನೆ, ಸ್ನೇಹತ್ಯಾಗ, ಸಮರ್ಪಣ ಭಾವಗಳು ಮೇಲುಗೈಯಾಗುತ್ತವೆ. ಆದ್ದರಿಂದ ಸೀತಾರಾಮರ ವಿವಾಹ ಮತ್ತು ಪ್ರೇಮಗಳು ಕೇವಲ ಒಂದು ಕುಟುಂಬದ ವಂಶವನ್ನು ಕೀರ್ತಿಯನ್ನು ವಿಸ್ತರಿಸುವ ಸೀಮಿತೋದ್ದೇಶದ ಫಲವಲ್ಲ ಇಡೀ ಲೋಕದ ಸದ್ಗುಣಗಳನ್ನು ಸಂವರ್ಧಿಸುವ, ಅದರ ಅಂತಃಸತ್ವವನ್ನು ಉದ್ಬೋಧಿಸುವ ಉತ್ಕರ್ಷಿಸುವ ವಿಶ್ವಪ್ರೇಮದ ಸಂಕೇತ ಎನ್ನುವ ದರ್ಶನವನ್ನು ಆದಿಯಿಂದಲೂ ಸೂಕ್ಷ್ಮವಾಗಿ ಸತ್ವಪೂರ್ಣವಾಗಿ ಪರಿಣಾಮಕಾರಿಯಾಗಿ ಕಟ್ಟುತ್ತಾರೆ ಕವಿ. ಅಯೋಧ್ಯೆಯ ಸೀಮಿತ ಆವರಣದಲ್ಲಿ ಅರಳುತ್ತಿದ್ದ ಸೀತಾರಾಮರ ಪ್ರೇಮ ಲೋಕವ್ಯಾಪ್ತಿಗೊಳ್ಳುವ ಸನ್ನಿವೇಶ ಪ್ರಾಪ್ತವಾಗುತ್ತದೆ. ಈ ಸಂದರ್ಭ ವಾಲ್ಮೀಕಿ, ಕುವೆಂಪು ಇಬ್ಬರಲ್ಲೂ ಸಮುಜ್ವಲವಾಗಿ ಚಿತ್ರಿತವಾಗುತ್ತದೆ.

---

[೧] ಅದೇ, 'ಮಮತೆಯ ಸುಳಿ ಮಂಥರೆ' ಪುಟ ೫೬, ಸಾಲು ೯-೧೮

ತಂದೆಯ ವಚನಪರಿಪಾಲನೆಗಾಗಿ ವನವಾಸದೀಕ್ಷೆಯನ್ನು ಕೈಗೊಳ್ಳುವ ಶ್ರೀರಾಮ ಈ ಕಠೋರ ವಿಷಯವನ್ನು ತನ್ನ ಕೋಮಲ ಮಡದಿಗೆ ತಿಳಿಸಿದಾಗ ಆಕೆ ಸಾಮಾನ್ಯ ಸ್ತ್ರೀಯಂತೆ ಅಂಜದೆ ಆಕ್ರೋಶಗೊಳ್ಳದೆ ತಾನು ಒಲಿದು ಬಂದದ್ದು ಆತ್ಮವಲ್ಲಭನನ್ನೇ ಹೊರತು ಮಾವನ ಅರಮನೆಯಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತಾಳೆ.

> ನಿನ್ನನಲ್ಲದೆ, ನಲ್ಲ, ಕೋಸಲ ನೆಲವನಲ್ಲ
> ನಾನೊಲ್ದುದಂದು, ಮೇಣಿಂದಿಗೂ ಮನೆಯೆನಗೆ
> ರಮಣನೆರ್ದೆಯಲ್ಲದೆಯೆ ಮಾವನರಮನೆಯಲ್ತು
> ನೀನಿರಲ್ಕೆನ್ನೊಡನೆ ನಾಡಾದರೆಂತಂತೆ
> ಕಾಡಾದೊಡಂ ಸುಖಿಯೆ ನಾಂ, ದುಃಖಿ ನಿನಗಾಗಿ
> ನಿನ್ನ ನೋವಿಂಗಳಲ್ಕೆಯೆ ಹೊರತೆನಗೆ ಬೇರೆ
> ಸಂಕಟದ ಸೋಂಕೆಲ್ಲಿ?"[೧]

ಸೀತೆ ಪ್ರೇಮಿಸಿದ್ದು, ಆರಾಧಿಸಿದ್ದು ರಾಮನನ್ನೆ ಹೊರತು ಅವನ ಸಂಪತ್ತುಗಳಲ್ಲ ಆದ್ದರಿಂದ ಅವಳಿಗೆ ನೈಜ ತೃಪ್ತಿಯನ್ನು ನೀಡುವುದು ರಾಮ ಪರಿಶುದ್ಧ ಪ್ರೇಮದ ಮನವೆ ವಿನಃ ಅವನ ತಂದೆಯ ವೈಭವಯುತವಾದ ಅರಮನೆಯಲ್ಲ ಎಂಬುದನ್ನು ಆಕೆ ಖಡಾಖಂಡಿತವಾಗಿ ನುಡಿಯುತ್ತಾಳೆ. ಆಕೆಗೆ ದುಃಖವಾಗಿದ್ದರೆ ಅದು ಕಾಡಿನಲ್ಲಿರಬೇಕೆಂಬುದಕ್ಕಲ್ಲ ತನ್ನ ಮನದನ್ನನಿಗೆ ಅನಿರೀಕ್ಷಿತವಾಗಿ ಉಂಟಾದ ನೋವಿಗಾಗಿಯೇ ಹೊರತು ತನ್ನ ನೋವಿಗಾಗಿಯಲ್ಲ. ಏಕೆಂದರೆ ಅವನ ಸುಖವೇ ಅವಳ ಸುಖ ಅವನ ದುಃಖವೇ ಅವಳ ದುಃಖವಾಗಿದೆ. ಸತಿಯ ಈ ಮಾತಿಗೆ ರಾಮ ವನವಾಸ ತನಗೆ ಮಾತ್ರವೇ ಹೊರತು ಉಳಿದವರಿಗಲ್ಲ ಎನ್ನುತ್ತಾನೆ. ಇದಕ್ಕೂ ಅವಳಲ್ಲಿ ಉತ್ತರವಿದೆ.

> 'ರಾಮನಾರ್ಧಾಂಗಿ ಸೀತೆಗೆ ಬೇರತನವಿಲ್ಲ
> ಪತಿಯ ಸುಖದುಃಖದರ್ಧಂ ಸತಿಗೆ'[೨]

ಸೀತೆ ತನ್ನ ಜೊತೆ ಕಾಡಿಗೆ ಬಂದಿರುವಂತೆ ನಾನಾ ರೀತಿಯಲ್ಲಿ ಪ್ರಯತ್ನಿಸಿದರೂ ಸೀತೆಯ ನಿರ್ಧಾರ ಮಾತ್ರ ದೃಢವಾಗಿದೆ. ಕಾಡಿನ ವಾಸ ಅರಮನೆಯ ವಾಸವಲ್ಲ. ಅಲ್ಲಿ ಹೋಗುವುದು ಸಂಯಮದ ತಪೋ ಜೀವನಕ್ಕೆ ವಿನಃ ಸುಖ ಜೀವನಕ್ಕಲ್ಲ ಎಂಬುದು ಆಕೆಗೆ ಅರಿವಿದೆ. ಅರಣ್ಯವಾಸಕ್ಕೆ ತನ್ನೊಡನೆ ಕರೆದುಕೊಂಡು ಹೋಗಲು ಹಿಂಜರಿಯುವ ರಾಮನ ಮನಸ್ಸನ್ನು ಅರಿತ ಸೂಕ್ಷ್ಮವತಿ ಸೀತೆ ರಾಮನಿಗೆ ಹೀಗೆ ಭರವಸೆಯನ್ನು ನೀಡುತ್ತಾ ಅವನ ಮನದ ಭೀತಿಯನ್ನು ಶಮನಗೊಳಿಸುತ್ತಾಳೆ.

> ". . . . ಪತಿವ್ರತಾಧರ್ಮಮಂ
> ಕೈಕೊಂಡು, ನಿಯಮ ವಜ್ರದೊಳಿಂದ್ರಿಯಾಗಳಂ

---

[೧] ಶ್ರೀರಾಮಾಯಣದರ್ಶನಂ, 'ಊರ್ಮಿಳಾ' ಪುಟ ೮೯, ಸಾಲು ೨೪೨-೪೮.
[೨] ಅದೇ, ಪುಟ ೮೯, ಸಾಲು ೨೫೦-೨೫೧.

ಬಿಗಿದು ದೃಢಮನದಿ, ಸೇವಿಪೆ ನಿನ್ನನ್ ಅವಚತ್ತು
ರಾಜೋಪಭೋಗ ಸರ್ವಸ್ವಮಂ! ಬದುಕುವೆನ್
ಹಣ್ಣು ಹಂಪಲು ಕಂದಮೂಲಂಗಳನೆ ತಿಂದು;
ಮತ್ತಾವ ತೆರದೊಳುಂ ನಿನಗಡಚಣೆಯನೀಯೆನ್
ನಿನ್ನೊಡನೆ ಬಾಳ್ವ, ನಿನ್ನೊಡನಲೆವ, ಮೇಣಂತೆ
ನಿನ್ನಯ ಸರಂಗೇಳ್ವ ಸೌಭಾಗ್ಯವೊಂದದುವೆ
ಸಾಲ್ಗೆನಗೆ!"[೧]

ಮುಂದಿನ ವನವಾಸದಲ್ಲಿನ ಸೀತಾರಾಮರ ಪ್ರೇಮ ಕಾಮರಹಿತವಾದ ದಾಂಪತ್ಯ ಪ್ರೇಮ. ಜೀವನದ ತುಂಬು ಪ್ರೀತಿಯಲ್ಲಿ ತೇಲುತ್ತಿದ್ದ ಕಿರಿವಯಸ್ಸಿನ ಮುಂದಿನ ಹದಿನಾಲ್ಕು ವರ್ಷಗಳೂ ಇಂದ್ರಿಯಗಳನ್ನು ಸೈರಿಸಿ ಗಂಡಹೆಂಡಿರ ದೈಹಿಕ ಭೋಗವನ್ನು ತೊರೆದು ಶುದ್ಧ ತಪಶ್ಚರ್ಯೆಯಲ್ಲಿ ಇರುವುದಾಗಿ ಘೋಷಿಸುವ ಈ ಸಂದರ್ಭ ಪತಿಭಕ್ತಿಯನ್ನು, ಅವಳ ಹೃದಯ ಮಹೋನ್ನತಿಯನ್ನು ತೆರೆದು ತೋರುತ್ತದೆ. 'ಇದರಿಂದ ಒಬ್ಬರು ಮತ್ತೊಬ್ಬರ ಆತ್ಮದ ಆಳವನ್ನು ಪರಿಪೂರ್ಣವಾಗಿ ಅರಿಯಲು ಮತ್ತು ಆ ಸಾಧನೆಯಿಂದ ತಮ್ಮ ವ್ಯಕ್ತಿತ್ವವನ್ನು ಅಪೂರ್ವ ಎತ್ತರಕ್ಕೆ ಏರಿಸಿಕೊಂಡು ಲೋಕಾದರ್ಶರಾಗಲು ಸಹಾಯಕವಾಯಿತು'[೨]

ವನವಾಸಕ್ಕೆ ಹೊರಡಲು ಸಿದ್ಧಳಾದ ವಾಲ್ಮೀಕಿಯ ಸೀತೆ ನಾರುಡೆಯನ್ನು ಧರಿಸಬೇಕಾಗಿ ಬಂದಾಗ ಬೆದರುತ್ತಾಳೆ. ದುಃಖಿಸುತ್ತಾಳೆ, ಕಡೆಗೆ ಮಾವ ತರಿಸಿಕೊಟ್ಟ ದಿವ್ಯಾಭರಣಗಳಿಂದ ತನ್ನನ್ನು ಅಲಂಕರಿಸಿಕೊಳ್ಳುತ್ತಾಳೆ. ಆದರೆ ಕುವೆಂಪು ಸೀತೆ ಸಂಯಮದ ಸಾಕಾರಮೂರ್ತಿ. ಆಕೆಯೇ ಸ್ಪಷ್ಟಪಡಿಸಿದಂತೆ ರಾಮನ ಸಾನಿಧ್ಯವೇ ದಿವ್ಯಾಭರಣ, ಆದ್ದರಿಂದಲೇ ಆಕೆ ನಾರುಮಡಿಯನ್ನು ಧರಿಸಬೇಕಾಗಿ ಬಂದಾಗ ತುಸುವು ದುಃಖಿತಳಾಗದೇ ಉಡುವುದಕ್ಕೆ ತೊಡಕಾಗಿ ರಾಮನನ್ನು ನೋಡುತ್ತಾಳೆ ವಿನಃ ಬೆದರುವುದಿಲ್ಲ.

ಪತಿಯೊಡನಿದ್ದ ಸೀತೆಗೆ ಎಲೆಮನೆಯೂ ಅರಮನೆಗಿಂತಲೂ ಮಿಗಿಲು. ಅವಳ ಹೃದಯ ವೈಶಾಲ್ಯ ಪರಹೃದಯ ಗ್ರಹಣಶಕ್ತಿ ಅದ್ಭುತವಾದುದು. ತನ್ನ ಕಾಂತನಿಂದ ದೂರವಾಗಿ ಆತನ ಶ್ರೇಯಸ್ಸಿಗಾಗಿ ತಪಸ್ಸನ್ನು ಕೈಗೊಂಡ ಊರ್ಮಿಳೆಯ ಹಿರಿಮೆಯು ಆಕೆಗೆ ಅರಿವಿದೆ. ಅದಕ್ಕಾಗಿಯೇ ತನ್ನ ಎಲೆಮನೆಯ ಮುಂದಿನ ಕಲ್ಬಂಡೆ ಆಕೆಗೆ 'ಕಲ್ದವಸಿ' ಯಾಗುತ್ತದೆ. ಊರ್ಮಿಳೆಗೆ ಮತ್ತವಳ ಸಂಯಮಕೆ ಪ್ರತಿಮೆಯಾಗುತ್ತದೆ. ಅಷ್ಟೆ ಅಲ್ಲ ಗಿರಿವನ ಪ್ರಿಯನಾದ ರಾಮನ ಅರ್ಧಾಂಗಿ ಪ್ರಕೃತಿ ಸೌಂದರ್ಯದ ಪರಮ ಉಪಾಸಕಿಯಾಗುತ್ತಾಳೆ. ಅಡುಗೆ ಕಾರ್ಯ ಮರೆತು ಎಳೆಬಿಸಿಲಿನೊಡನೆ ಆಡುತ್ತಾಳೆ. ಅದರ ಸೌಂದರ್ಯಕ್ಕೆ ಮೈಮರೆಯುತ್ತಾಳೆ.

ಗಗನದೌನ್ನತ್ಯಕೇರ್ದಾ ಶಿಖರಮೌಳಿಯಲ್ಲಿ ಆಕೆ ತನ್ನ ತಂದೆಯನ್ನು ಕಾಣುತ್ತಾಳೆ. ಋಷಿಕುಮಾರನ ಮುಗ್ಧ ಆಟಗಳನ್ನು ಭಾವಪರವಶವಾಗಿ ಬಣ್ಣಿಸುವ ಮುಗ್ಧ ಮನಸ್ಸು

---

[೧] ಅದೇ, ಪುಟ ೬೦, ಸಾಲು ೨೭೪-೮೨.

[೨] ಶ್ರೀರಾಮಾಯಣ ದರ್ಶನಂ; ಒಂದು ವಿಮರ್ಶಾತ್ಮಕ ಅಧ್ಯಯನ, ಡಾ.ಹೆಚ್.ಜೆ.ಲಕ್ಕಪ್ಪಗೌಡ.

ಅವಳದು. ವನವಾಸ ಕಾಲದಲ್ಲಿ ಅಡುಗೆ ಮಾಡುವ, ಹಸಿಸೌದೆಯ ಮಸಿಯಿಂದ ಮುಖವನ್ನು ಮಸಿಮಾಡಿಕೊಳ್ಳುವ, ಹಸಿವು ಎಂದ ಗಂಡನಿಗೆ 'ಪಸಿಸೌದೆಯಿಂದಡುಗೆಯೆಂತಪ್ಪುದಯ್? ಪೊಗೆಯನುಣಿಮೆನೆ'[೧] ಎಂದು ಮುನಿಸಿಕೊಳ್ಳುವ, ಹುಸಿಕೋಪ ತೋರುವ ಅವನನ್ನು ಹಂಗಿಸಿ ಹಾಸ್ಯಗೈಯುವ, ಸೀತೆಯ ಅತ್ಯಂತ ಆತ್ಮೀಯವಾದ ಸಹಜ ಸೊಬಗಿನ, ಅವಳ ಮುಗ್ಧತನವನ್ನು ಪರಿಚಯಿಸುವ ಚಿತ್ರಗಳು ಮೊದಲ ಸಂಪುಟದಲ್ಲಿ ಹೇರಳವಾಗಿ ಬರುತ್ತದೆ.

ವಾಲ್ಮೀಕಿಯಲ್ಲಿ ಶ್ರೀರಾಮತನಗೆ ಆಹ್ಲಾದವುಂಟು ಮಾಡಿದ ನಿಸರ್ಗದ ರಮಣೀಯ ದೃಶ್ಯಗಳನ್ನು ಅತ್ಯಂತ ಸುಂದರವಾಗಿ ಮತ್ತು ಆತ್ಮೀಯವಾಗಿ ಸೀತೆಗೆ ಬಣ್ಣಿಸುತ್ತನಾದರೂ ಅವರಿಬ್ಬರ ಎಳವರಯದ ಮಧುರ ಪ್ರಣಯದ ವಿಕಾಸ ವಿಲಾಸಗಳ ಜೀವಂತ ಚಿತ್ರಗಳನ್ನು ಬಿಡಿಸುವಲ್ಲಿ ಕವಿ ಕೃಪಣನಾಗಿದ್ದಾನೆ ಎನಿಸುತ್ತದೆ. ಆದರೆ ಕುವೆಂಪು ಲೇಖನಿ ಈ ಮಾನವ ದಂಪತಿಗಳು ದಿವ್ಯದಂಪತಿಗಳಾಗುವ ದಿಸೆಯಲ್ಲಿ ಅವರಿಬ್ಬರ ನಡುವೆ ಬೆಳೆದ ಅರಳಿದ ಅನೂನ ಮೋಹಕ ಪ್ರೇಮದ ವರ್ಣವರ್ಣದ ಜಗತ್ತನ್ನು ಅನ್ಯಾದೃಶ್ಯವಾಗಿ ಸೆರೆಹಿಡಿದಿದೆ.

ಶ್ರೀರಾಮ ಪ್ರಕೃತಿ ಸೌಂದರ್ಯ ಸೀತೆಯ ಸೌಂದರ್ಯವನ್ನು ಮೀರಿಸಿದೆ ಎಂದು ಬಣ್ಣಿಸುತ್ತಾ ಆಕೆಗೆ ಸೃಷ್ಟಿಯ ಸೌಂದರ್ಯವನ್ನು ತೋರುತ್ತಾನೆ.

> "ಒಲವು ಬಳಿಯಿರೆ ಚೆಲುವು ಬೇಟಮಂ
> ಕೊನರಿಸುವುದಲ್ತೆ? ನಿನ್ನಂತೆ ವೋಲ್ ಚೆಲ್ವಯೀ
> ಸ್ರೋತಸ್ವಿನೀ ನೀರಸೀರೆಯ ತೆರೆಯ ಸಿರಿ ಮೆರೆವ
> ತೊರೆನೀರೆಯೀಕೆಯಂ ಕಂಡು ಕರುಬದಿರೆನ್ನ
> ಮಾವನ ಮುದ್ದುಮಗಳೆ!"[೨]

ರಾಮನ ಈ ಮಾತಿಗೆ ಸೀತೆಯ ಜಾಣ್ಮೆಯ ಉತ್ತರ ಸಿದ್ಧವಿದೆ. ದಾಂಪತ್ಯದ ಹಾಸ್ಯ ಸನ್ನಿವೇಶದಲ್ಲೂ ರಾಮನ ಬಗೆಗಿನ ಅವಳ ನಂಬಿಕೆ ಮತ್ತು ಗಾಢಪ್ರೇಮ ವ್ಯಕ್ತವಾಗುತ್ತದೆ.

> ಕರುಬೇತಕೆರ್ದೆಯನ್ನ?
> ಪೊಳೆಯ ಕನ್ನಡಿಯೊಳಗೆ ನಾನೆ ಮಾರ್ಪೊಳೆಯಲದೆ
> ನಿನಗೆ ಬೆಮೆಯಿೀಯುತಿದೆ! ನಾನಲ್ಲದನ್ಯರಂ
> ಕಾಣಬಲ್ಲನೆ ನನ್ನ ರಾಮಚಂದ್ರಂ ಪ್ರಕೃತಿ
> ಲೋಕದಲಿ?"[೩]

ಎಂಬ ಸೀತೆಯ ಮಾತು ಕಿವಿಗೆ ಜೇನಾಯಿತು. ಸೀತೆ ಪ್ರಕೃತಿ ಸ್ವರೂಪಿಣಿ ಎಂಬುದು ಅಲ್ಲಲ್ಲೆ ಇಂಥ ಸಂದರ್ಭಗಳಲ್ಲಿ ಧ್ವನಿಸುತ್ತಾ ಹೋಗುತ್ತದೆ. ಊಟಕ್ಕೆ ಅಣಿಮಾಡಿ ಕರೆದ ಲಕ್ಷ್ಮಣನಲ್ಲಿಗೆ

---

[೧] ಶ್ರೀರಾಮಾಯಣದರ್ಶನಂ; 'ಕುಣಿದಳುರಿಯ ಊರ್ವಶಿ' ಪುಟ ೧೫೦ ಸಾಲು ೧೭೮–೭೯.

[೨] ಅದೇ, 'ಪಾದುಕಾ ಕಿರೀಟ' ಪುಟ ೧೫೫ ಸಾಲು ೪೧–೪೫.

[೩] ಅದೇ, ಪುಟ ೧೫೫, ಸಾಲು ೪೭–೫೧.

ಎಳೆ ಹುಡುಗನಂತೆ ಓಡಿ ಬರುತ್ತಾನೆ. ಇವರ ಅವಸರವನ್ನು ನೋಡಿ ಸೀತೆ ಹುಸಿ ಸಿಡುಕಿನಿಂದ ಹೀಗೆ ಪರಿಹಾಸ್ಯಗೈಯುತ್ತಾಳೆ.

‘ಗಂಡು ಬರಿಹೊಟ್ಟೆ!
ಕೂಳಿರ್ಪೆಡೆಗೆ ಹರಣ ಹೋದುದನ್ ಲೆಕ್ಕಿಸದೆ
ಹಾರಿ ನುಗ್ಗಿದಪುದೇಂ ನಾಣ್ಗೇಡೊ!’[೧]

ಅತ್ರಿ ಆಶ್ರಮಕ್ಕೆ ತೆರಳಿದಾಗ ಸೀತೆ ಅನುಸೂಯೆಯ ಅಕ್ಕರೆಯಲ್ಲಿ ಮಗುವಾಗುತ್ತಾಳೆ. ಈ ಸಂದರ್ಭದಲ್ಲಿ ಅತ್ರಿಮುನಿ ಹೇಳುವ ‘ಶಿಲ್ಪಿಯ ನಿಶಿತ ಟಂಕದ ಮೊನೆಯ ಕಠಿಣ ಶಿಕ್ಷೆಗಲ್ಲದೆ ಪೂಣ್ಮವುದೆ ಕಲಾಪೂರ್ಣಮಹಾದೇವತಾ ವಿಗ್ರಹಂ!’[೨] ಎಂಬ ಮಾತು ದಿಟವಾಗಿ ತೋರುತ್ತದೆ. ಸೀತೆ ಹಲವು ಕಷ್ಟ ಪರಂಪರೆಯ ಉಳಿ ಏಟಿನಿಂದ ಪಕ್ವಗೊಂಡ ಕಾಳಿಕೆಯನ್ನು ಕಳೆದುಕೊಂಡ ಅಪ್ಪಟ ಚಿನ್ನದಂತಾಗುತ್ತಾಳೆ. ದಂಡಕಾರಣ್ಯದಲ್ಲಿನ ರಾಕ್ಷಸರ ಹಾವಳಿಯ ವೃತ್ತಾಂತವನ್ನು ಅತಿಮುನಿಯಿಂದ ಕೇಳಿದ ಸೀತೆ ಬೆಚ್ಚುತ್ತಾಳೆ. ಇದನ್ನು ಕಂಡ ಅನಸೂಯೆ ಮುಂದೆ ಒದಗಲಿರುವ ಕಷ್ಟಕ್ಕೆ ಸಿದ್ಧಳಾಗುವಂತೆ ಪತಿವ್ರತಾ ಧರ್ಮವನ್ನು ಬೋಧಿಸುತ್ತಾಳೆ. ಇಲ್ಲಿ ಅನುಸೂಯೆ ಸೀತೆಯನ್ನು ಮತ್ತೂ ಗಟ್ಟಿಗೊಳಿಸುತ್ತಾಳೆ. ಅನಸೂಯೆಯ ಮಮತೆಗೆ ಸೋತ ಸೀತೆ ಮಗುವಂತೆ ತನ್ನ ಸ್ವಯಂವರದ ವೃತ್ತಾಂತವನ್ನು ನಮ್ರವಾಗಿ ಹೇಳುತ್ತಾಳೆ. ತಪಸ್ವಿಗಳನ್ನು ಬೀಳ್ಕೊಟ್ಟು ದಂಡಕಾರಣ್ಯವನ್ನು ಪ್ರವೇಶ ಮಾಡಿದ ಸೀತಾರಾಮರಿಗೆ ವಿರಾಧ ಎದುರಾಗುತ್ತಾನೆ. ವಿರಾಧನಿಗೆ ಮುಕ್ತಿ ದೊರಕುವುದು ಸೀತೆಯ ಮೋಡದಿಂದಲೇ. ಪಾತಿವ್ರತ ಧರ್ಮವೇ ತನ್ನ ಪರಮ ಧರ್ಮವೆಂದು ನಂಬಿದ. ಸ್ನೇಹಮೂರ್ತಿಯಾದ ಪ್ರೇಮದೀಪ್ತಿಯಾದ ಸೀತೆ ಗಂಡ ಮಾಡಿದೆಲ್ಲವನ್ನು ಸರಿಯೆಂದು ಕಣ್ಮುಚ್ಚಿ ಒಪ್ಪುವ ಸ್ತ್ರೀಯಲ್ಲ. ಗಂಡನ ನಡೆನುಡಿಗಳನ್ನು ಉಜ್ಜಿ ಪರೀಕ್ಷಿಸುವ ಸಾತ್ತ್ವಿಕ ಧೈರ್ಯವೂ ಆಕೆಗಿದೆ. ಕಾಡಿದ ವಿರಾಧನನ್ನು ಕೊಂದಾಗ ಸೀತೆ ಮರಗುವುದಿಲ್ಲ. ಆದರೆ ರಾಮ ರಾಕ್ಷಸರನ್ನು ವಧಿಸುವುದಾಗಿ ಋಷಿಗಳಿಗೆ ಮಾತುಕೊಟ್ಟಾಗ ಅವಳ ಹೆಣ್ತನದ ಮನಸ್ಸು ಮರುಗುತ್ತದೆ. ಕಾರಣವಿಲ್ಲದೆ ರಾಕ್ಷಸರನ್ನು ಕೊಲ್ಲುವುದಕ್ಕೆ ಆಕ್ಷೇಪಿಸುತ್ತಾಳೆ.

“ಬಗೆಯೊಂದು ಶಂಕೆಯನರುಹಿದಪೆನಾಂ,
ಹೃದಯಪ್ರಿಯ, ಬಾಲಭಾಷಿತವನಾದರದಿಂದೆ
ಕೇಳಿ ಕರುಣಿಪುದೆನಗೆ: ಋಷಿಗಳ್ಗೆ ನುಡಿಗೊಟ್ಟೆಯಯ್;
ರಾಕ್ಷಸ ವಧೆಗೆ ಪೂಣ್ದೆಯಯ್‌ಮ್; ವೈರಮಂ ವ್ರತವಾಂತೆಯಯ್
ಹೇ ಸ್ನೇಹನಿಧಿ! ಓರ್ವನನ್ಯಾಯಿಯಾದೊಡಂ
ಸರ್ವರಾಕ್ಷಸರೆಂತು ಸಂಹಾರಕರ್ಹರಯ್?
ಕ್ಷಾತ್ರಕೇಂ ಕ್ರೌರ್ಯಂ ಕಿರೀಟಮೆ?”[೩]

---

[೧] ಅದೇ, ಪುಟ ೧೫೭, ಸಾಲು ೯೯–೧೦೧

[೨] ಅದೇ, ‘ಅತ್ರಿಯಂದಗಸ್ತ್ಯಂಗೆ’ ಸಾಲು ೫೨–೫೪, ಪುಟ ೧೮೦.

[೩] ಅದೇ, ಪುಟ ೧೮೭, ಸಾಲು ೨೪೬–೨೫೨.

ಸೀತೆಯ ಪ್ರಶ್ನೆಗೆ ನಯವಾಗಿ ತಾರ್ಕಿಕವಾಗಿ ಉತ್ತರಿಸಿ ತನ್ನ ನಿಲುವನ್ನು ಸಮರ್ಥಿಸಿಕೊಳ್ಳುತ್ತನಾದರೂ ಭೂಜಾತೆ ರಾಮನ ನಿಲುವನ್ನು ಒಪ್ಪುವುದಿಲ್ಲ. ಇಂಥ ಸಂದರ್ಭಗಳಲ್ಲಿ ಇವಳ ಮಾತೃಹೃದಯ ಜಾಗೃತಗೊಳ್ಳುವುದನ್ನು ನೋಡಬಹುದು. ಮಹಾವ್ಯಕ್ತಿಯೊಬ್ಬನನ್ನು ಪತಿಯನ್ನಾಗಿ ಪಡೆದ ಸತಿ ಸಾಮಾನ್ಯೆಯಾದರೂ ಅವನ ನಿರಂತರ ಸಹಚರ್ಯೆಯಿಂದ ಪ್ರಭಾವದಿಂದ ತನ್ನನ್ನು ತಾನು ಶೋಧಿಸಿಕೊಂಡು ಅವಗುಣಗಳನ್ನು ಅಳಿಸಿಕೊಂಡು ಸದ್ಗುಣಗಳನ್ನು ಬೆಳೆಸಿಕೊಂಡು ಕ್ರಿಯಾಶಕ್ತಿಯನ್ನು ವರ್ಧಿಸಿಕೊಂಡು ಅವನೆತ್ತರಕ್ಕೆ, ಕೆಲವೊಮ್ಮೆ ಅವನನ್ನೂ ಮೀರಿ ಬೆಳೆಯುವುದು ಸಹಜವಾದರೂ ಅದೇ ಸಮಯದಲ್ಲಿ ತನ್ನ ವೈಯಕ್ತಿಕ ಆಸೆ ಆಕಾಂಕ್ಷೆಗಳನ್ನು ಸುಖ ಸಂತೋಷಗಳನ್ನು ತ್ಯಾಗ ಮಾಡಿ ಕಷ್ಟ ಜೀವನವನ್ನು ನಿಷ್ಟುರ ಜೀವನ ವಿಧಾನವನ್ನು ಆಕೆ ಸ್ವಯಿಚ್ಛೆಯಿಂದ ಅನುಸರಿಸುವುದು ಅತ್ಯಗತ್ಯವಾಗುತ್ತದೆ. ಅಂಥವರು ಮಾತ್ರ ಮಹಾಸತಿಯ ಪಟ್ಟಕ್ಕೇರಲು ಸಾಧ್ಯ. ಆತ್ಮೋನ್ನತಿ ತ್ಯಾಗದಿಂದಲೇ ವಿನಃ ಭೋಗದಿಂದಲ್ಲ. ತ್ಯಾಗ ಸೀತೆಯ ವ್ಯಕ್ತಿತ್ವದ ಮೂಲದ್ರವ್ಯವಾಗಿದ್ದರೂ ಅದನ್ನು ಗಟ್ಟಿಗೊಳಿಸುವ ಸಂದರ್ಭಗಳು ಅಲ್ಲಲ್ಲಿಯೇ ಕಾಣಿಸಿಕೊಳ್ಳುತ್ತವೆ.

ದಿವ್ಯಜ್ಞಾನಿಗಳಾದ ಅಗಸ್ತ್ಯರು ವನವಾಸ ಮುಂದಿನ ಅವಧಿಯನ್ನು ಕಳೆಯಲು ಪಂಚವಟಿ ಸೂಕ್ತವಾದ ಜಾಗವೆಂದು ಸೂಚಿಸಿ ಹಾರೈಸಿ ಕಳುಹಿಸುತ್ತಾರೆ.

> "... ಮಗಳೆ, ಸೀತಾದೇವಿ
> ನಿನ್ನಳಲ ಲೆಕ್ಕಿಸದೆ ಪತಿಹಿತಂಕರಿಯಾಗು;
> ಲೋಕ ಶಂಕರಿಯಾಗು; ಮೇಣ್‌ಯಮ ಭಯಂಕರಿಯಾಗು
> ಲೋಕ್ ಮೂರಕೆ ಶೋಕವಾಗಿಹ ನಿಶಾಚರರ
> ನಿಷ್ಠುರ ನೀಲಕುಲಕೆ!"[೧]

ಮುಂದೆ ಸೀತೆ ಎದುರಿಸಬೇಕಾದ ತೊಂದರೆಗಳಿಗೆ ಸಿದ್ಧಳಾಗುವಂತೆ ಹಿತೋಪದೇಶವನ್ನು ಮಾಡುತ್ತಾರೆ. ಮಹರ್ಷಿ ಅಗಸ್ತ್ಯರು ಸೂಚಿಸಿದಂತೆ ಪಂಚವಟಿಗೆ ಬರುತ್ತಾರೆ. ಅಲ್ಲಿನ ಪ್ರಕೃತಿ ಸೌಂದರ್ಯವನ್ನು ಮೂವರು ಸವಿಯುತ್ತಾ ಹೋಗುತ್ತಿರುವಾಗ ಜಾನಕಿಯ ಕಾಲು ಜಾರುತ್ತದೆ. ಮುಂದೆ ಒದಗಲಿರುವ ಅನಾಹುತದ ಮುನ್ಸೂಚನೆಯಾಗಿ ಈ ಘಟನೆ ಕಾಣಿಸಿಕೊಳ್ಳುತ್ತದೆ. ಕವಿ ಮುಂದೆ ಒದಗಲಿರುವ ಘಟನೆಗಳನ್ನು ಸಂದರ್ಭ ಸಿಕ್ಕಾಗಲೆಲ್ಲ ಧ್ವನಿಸುತ್ತಾ ಹೋಗುತ್ತಾನೆ. ಸೀತೆ ತನ್ನ ಚಾರಿತ್ರ್ಯ ಪರೀಕ್ಷೆಯ ಪ್ರಯೋಗಶಾಲೆಯನ್ನು ತಾನೇ ಆಯ್ಕೆ ಮಾಡಿಕೊಂಡು ಆ ಪ್ರಜ್ಞಾಪೂರ್ವಕವಾಗಿ ತನ್ನನ್ನು ಅಪೂರ್ವ ಶೋಧನೆಗೆ ಒಡ್ಡಿಕೊಂಡಳು ಎಂಬುದಾಗಿ ಕವಿ ಧ್ವನಿಸುತ್ತಾ ಹೋಗುತ್ತಾನೆ. ಸೀತೆ ತನ್ನ ಚಾರಿತ್ರ್ಯ ಪರೀಕ್ಷೆಯ ಪ್ರಯೋಗ ಶಾಲೆಯನ್ನು ತಾನೇ ಆಯ್ಕೆ ಮಾಡಿಕೊಂಡು ಅಪ್ರಜ್ಞಾಪೂರ್ವಕವಾಗಿ ತನ್ನನ್ನು ಅಪೂರ್ವ ಶೋಧನೆಗೆ ಒಡ್ಡಿಕೊಂಡಳು ಎಂಬುದನ್ನು ಕವಿ ಅಲ್ಲಲ್ಲಿಯೇ ಮಿಂಚಿಸುತ್ತಾ ಹೋಗುತ್ತಾನೆ. ಚಿಕ್ಕ ಚಿಕ್ಕ ಪ್ರಸಂಗಗಳಲ್ಲಿಯೂ ಕವಿ ಸೀತೆಯ ವ್ಯಕ್ತಿತ್ವದ ಹಿರಿಮೆಯನ್ನು ಸೂಕ್ಷ್ಮವಾಗಿ ಧ್ವನಿಸುತ್ತಾ ಹೋಗುತ್ತಾನೆ.

---

[೧] ಶ್ರೀರಾಮಾಯಣದರ್ಶನಂ, 'ಅತ್ರಿಯಿಂದಗಸ್ತ್ಯಂಗೆ' ಪುಟ ೧೯೫, ಸಾಲು ೪೭೦-೪೭೪.

ತಂಗಿಯ ಮಾತಿನಿಂದ ಪ್ರೇರಿತನಾಗಿ ಸೀತೆಯ ಅಪಹರಣಕ್ಕೆ ಕೈಹಾಕಿದ ರಾವಣ ಮಾರೀಚನ ಮನವನ್ನು ಒಲಿಸಿಕೊಂಡು ಬಂದು ಸೀತಾಪಹರಣಕ್ಕೆ ಸಿದ್ಧನಾಗುತ್ತಾನೆ. ಆ ಮೂಲಕ ತನ್ನ ಕೇಡಿಗೆ ತಾನೇ ಸೋಪಾನವಾಗುತ್ತಾನೆ. ಗುಣಮೂರ್ತಿ, ಕ್ಷಣಿಕ ಮೋಹವನ್ನು ಜಯಿಸಿದ ಸೀತೆ ಕೂಡ ಸ್ವರ್ಣಮೃಗದ ಮೋಹಕ್ಕೆ ಒಳಗಾಗುತ್ತಾಳೆ. ಕ್ಷುಲ್ಲಕ ಬಯಕೆಗೆ ಒಳಗಾಗಿ ಲಕ್ಷ್ಮಣನ ಮಾತನ್ನು ನಿರ್ಲಕ್ಷಿಸಿ ಅಪಾಯವನ್ನು ತಾನಾಗಿಯೇ ಬರಮಾಡಿಕೊಳ್ಳುತ್ತಾಳೆ. ಬೀಳುವಿಕೆ ಎಂಬುದು ಅವನತಿಯ ಪ್ರಥಮ ಹಂತವಾದರೆ ಇಲ್ಲಿ ಸೀತೆಯ ಬೀಳುವಿಕೆ ಊರ್ಧ್ವಾಮುಖದ ಬೆಳವಣಿಗೆಗೆ ನೆರವಾಗುತ್ತದೆ. ಪತನಕ್ಕೆ ಕಾರಣವಾಗಬಹುದಾದ ವ್ಯಕ್ತಿ ದೌರ್ಬಲ್ಯ ಉದ್ಧಾರಕ್ಕೆ ಹೇತುವಾಗುತ್ತದೆ. 'ದೇವಿಯೇ ಕೊನೆಯ ಬಯಕೆಯಂ ತೀರ್ಚಿದಪೆನಶ್ರಮದಿ' ಎಂಬ ರಾಮವಾಣಿಯಲ್ಲಿ ಈ ಇಂಗಿತವೂ ಅಡಗಿದೆ.

ಮಾರೀಚ ರಾಮಬಾಣಕ್ಕೆ ಅಸುವನ್ನರ್ಪಿಸುವಾಗ ರಾಮಧ್ವನಿಯಿಂದ ಆರ್ತನಾದ ಮೂಡಿದ್ದ ಸಹಜವಾಗಿಯೇ ಸಾಧ್ವಿ ಸೀತೆಯ ಮನದಲ್ಲಿ ದುರಂತದ ಸಂಶಯದ ಅಲೆಗಳನ್ನು ಎಬ್ಬಿಸುತ್ತದೆ. ಪತಿಕ್ಷೇಮ ಕಾತರಳಾದ ಸತಿ ಅವನ ಸಹಾಯಕ್ಕೆ ಹೋಗುವಂತೆ ಮತ್ತೆ ಮತ್ತೆ ಲಕ್ಷ್ಮಣನನ್ನು ಬೇಡುತ್ತಾಳೆ. ಕಾಡುತ್ತಾಳೆ, ರೋಧಿಸುತ್ತಾಳೆ. ನಿಜಸ್ಥಿತಿಯ ಅರಿವಿದ್ದ ಲಕ್ಷ್ಮಣ ಸತ್ಯ ಸ್ಥಿತಿಯನ್ನು ಆಕೆಗೆ ತಿಳಿಸಲು ಪ್ರಯತ್ನಿಸುತ್ತಾನೆ. ಕೊನೆಗೊಮ್ಮೆ ಬಂದ 'ಲಕ್ಷ್ಮಣಾ' ಎಂಬ ಆರ್ತಧ್ವನಿ ದೃಢಚಿತ್ತನಾದ ಲಕ್ಷ್ಮಣನೂ ಬೆಬ್ಬಳಿಸುವಂತೆ ಮಾಡಿತೆಂದರೆ ಇನ್ನೂ ಸತಿ ಸೀತೆಯ ಪರಿಸ್ಥಿತಿ ಹೇಗಾಗಿರಬಹುದು? ಈ ಸಮಯದಲ್ಲಿ ಇವಳ ಸಂಯಮ ಕದಡುತ್ತದೆ. ಲಕ್ಷ್ಮಣನ ಮೇಲೆ ಇದ್ದ ಪುತ್ರವಾತ್ಸಲ್ಯ .ಕದಲುತ್ತದೆ. ಆಕೆಯ ಬಾಯಿಂದ ಕಠಿಣ ನುಡಿಗಳು ಹೊರಹೊಮ್ಮುತ್ತವೆ. ಇದುವರೆಗೂ ಎಲ್ಲಿಯೂ ಇಷ್ಟು ಎಲ್ಲೇ ಮೀರಿ ಈಕೆ ಮಾತನಾಡಿರಲಿಲ್ಲ. ಎಷ್ಟೇ ಕಾಡಿ ಬೇಡಿ ಹೇಳಿದರೂ ಅಣ್ಣನ ನೆರವಿಗೆ ತೆರಳಿದ ಲಕ್ಷ್ಮಣನನ್ನು ಕಂಡು ಕೆಂಡಮಂಡಲವಾಗುತ್ತಾಳೆ.

> "ಎಲವೊ ಲಕ್ಷ್ಮಣಾ,
> ಎಳೆಯ ಮುಳ್ ಚುಚ್ಚಲ್ಕೆ ನೋವಲ್ತದುವೆ ಮೆಚ್ಚು;
> ಬೆಳೆದರಾ ಮುಳ್ ಅದರ ಕಚ್ಚು ಮುತ್ತಹುದೆ ಪೇಳ್?
> ಎಳೆಯ ಕರು ಬೆಳೆದ ಮೇಲದರ ತಾಯನೆ ಬೆದೆಗೆ
> ಬಯಸಿದಪುದಯ್ಯೊ!"[೧]

ಆಪತ್ತಿನಲ್ಲಿ ಸಿಕ್ಕಿಕೊಂಡ ಸೀತೆಯ ಈ ವರ್ತನೆಯಲ್ಲಿ ವಾಸ್ತವತೆಯ ಸೊಗಡು ಮೇಳೈಸಿದೆ. ಗಂಡ ಆಪತ್ತಿನಲ್ಲಿ ಸಿಕ್ಕಿಕೊಂಡ ಎಂಬುದನ್ನು ಅರಿತ ಸಾಧ್ವಿ ಆಡುವ ಸಹಜ ಮಾತುಗಳಾಗಿ ಇವು ಕಾಣಿಸಿಕೊಳ್ಳುತ್ತವೆ. ಅತ್ಯಂತ ಸೂಚ್ಯ ಮತ್ತು ಸಂಕ್ಷಿಪ್ತವಾಗಿ ಈ ಮಾತುಗಳು ಮೂಡಿಬಂದಿವೆ.

---

[೧] ಅದೇ, 'ಓಲಕ್ಷ್ಮಣಾ' ಪುಟ ೨೪೫, ಸಾಲು ೩೬೫-೬೯

ಅತ್ತ ಲಕ್ಷ್ಮಣ ಮರೆಯಾದೊಡನೆ ಇತ್ತ ರಾವಣ ಧಾವಿಸಿ ಬರುತ್ತಾನೆ. ಮುನಿರೂಪವನ್ನು ಕಂಡು ಸಂತೋಷಪಟ್ಟರು ಆ ಕ್ಷಣದಲ್ಲಿಯೇ ಮಾಯಾವಿ ಎಂದು ಗುರುತಿಸುತ್ತಾಳೆ. ಕುವೆಂಪು ಸೀತೆ ಅತ್ಯಂತ ಸೂಕ್ಷ್ಮವತಿ ಎಂಬುದು ಇಂಥ ಸಂದರ್ಭಗಳಲ್ಲಿ ಗೋಚರಿಸುತ್ತದೆ. ಅವನ ನಡೆನುಡಿ, ಭಾವ ಭಂಗಿಯಲ್ಲೆ, ಮೈ ಕಂಪಿನಲ್ಲೆ ಮಾಯಾವಿ ಎಂಬುದನ್ನು ಗುರುತಿಸುವಷ್ಟು ಚತುರೆಯಾಗಿ ಗೋಚರಿಸುತ್ತಾಳೆ. ಪತಿ ಮೈದುನರು ಬರುವ ತನಕ ಮಾತಿನ ಬಲೆಯಲ್ಲಿ ಸಿಕ್ಕಿಹಾಕಿರಬೇಕೆಂದು ಚತುರ ಯೋಜನೆಯನ್ನು ಬೀಸುತ್ತಾಳೆ.

ಸೀತೆಯನ್ನು ಅಪಹರಿಸಿಕೊಂಡು ಬಂದ ರಾವಣ ಯಾರಿಗೂ ಕಾಣದಂತೆ ತ್ರಿಕೂಟಗಿರಿಯ ತುದಿಯ ಸಂಪತ್ ಸಮೃದ್ಧವಾದ ಅರಮನೆಯಲ್ಲಿ ಇಳುಹಿದನು. ರಾವಣನನ ಕಡೆಗೆ ಒಲಿಯುವಂತೆ ಮಾಡುವುದಾಗಿ ಹೇಳಿದ ಚಂದ್ರನಖಿ 'ಕುಯ್ದೆಸೆದ ಮಲರಂತೆ' ಗರಿಯ ಹಾಸಿನಲ್ಲಿ ಮೈಮರೆತು ಮಲಗಿದ್ದ ಭೂಜಾತೆಯನ್ನು ಕಂಡು ಹೇಳುವ ಉದ್ಗಾರವಿದು.

ಇನ್ನೆಗಂ
ನೀಂ ಗೆಲಿದ, ನಿನ್ನನೊಲಿದತ್ತಿಗೆಯರಂತಲ್ಲಮೀ
ಪಣ್ ಕಣಾ! ನಿನ್ನ ಛಲಕಿವಳ ಛಲ ಪಡಿಮಲೆಯೆ
ಗೆಲ್ವರಾರದನರಿಯೆನಯ್: ಮೂರ್ಛೆಯೊಳುಮೆಂತು
ದೃಢತೆ ಪಲ್ಗಚ್ಚಿದಂತಿದೆ, ನೋಡು, ಕೋಮಲೆಯ
ಮುಖದಿ[೧]

ಪರರ ವಶದಲ್ಲಿದ್ದರೂ ಅವಳ ದೃಢತೆ, ಆತ್ಮ ತೇಜಸ್ಸು ಚಂದ್ರನಖಿಯಲ್ಲಿ ಸತ್ವಭಾವವನ್ನು ಮೂಡಿಸಿರುವುದನ್ನು ಧ್ವನಿಸುತ್ತದೆ. ಮುಂದಿನ ಸನ್ನಿವೇಶಗಳು ಇಲ್ಲಿನ ಪ್ರತಿ ಅಕ್ಷರಕ್ಕೂ ಜೀವ ತುಂಬುತ್ತಾ ಹೋಗುವುದನ್ನು ಗಮನಿಸಬಹುದು.

ಚಂದ್ರನಖಿ ತನ್ನ ಸುತ್ತಾ ಸೃಷ್ಟಿಸಿದ ಬೋಗಕಲಾಲೋಕವನ್ನು ಕಂಡ ಸೀತೆ ಕಂಗೆಡದೆ, ಹಿಂದೆ ತನಗೆ ಕೇಡುಂಟು ಮಾಡಲು ಬಂದಿದ್ದ ಚಂದ್ರನಖಿಯನ್ನು ನೋಡಿ ಬೆದರತೆ ಆಕೆಯನ್ನು ನಯವಾಗಿ ಕೇಳಿಕೊಳ್ಳುತ್ತಾಳೆ. ತನ್ನ ಮಾರ್ಗಕ್ಕೆ ಚಂದ್ರನಖಿಯನ್ನು ತಂದುಕೊಳ್ಳುತ್ತಾಳೆ. ಈ ಸಂದರ್ಭದಲ್ಲಿ ಚಂದ್ರನಖಿಗೆ ಸೀತೆ ಹೇಳುವ ಮಾತು ಆಕೆಯ ಜೀವನದ ಆದರ್ಶವನ್ನು ತಿಳಿಸುತ್ತದೆ.

'ಪತಿದೂರರಪ್ಪಾರ್ಯವನಿತೆಯರಿಗೀ ಪರಿಯ
ಹೇಯಮ್ ಸುಖಜೀವನಂ ಬನದ ಬಾಳ್ತೆಯಂ
ನೋಂಪಿಗೊಂಡೆನ್ ಪತಿಯ ಕೂಡೆ ನನಗದರಿಂದ
ನೋಂಪಿ ಮುಗಿವನ್ನಗಂ ಕಾಡೆ ಮನೆ, ವಲ್ಕಮುಡೆ
ಬೇರು ಬಿಳ್ಕೆಗಳೊಗರು.'[೨]

---

[೧] ಅದೇ, 'ಸಂಸ್ಕೃತಿಲಂಕಾ' ಪುಟ ೩೨೪, ಸಾಲು ೨೮–೩೩.
[೨] ಅದೇ, ಪುಟ ೩೨೭, ಸಾಲು ೧೦೯–೧೧೩.

ಅದರಂತೆ ಸೀತೆ ತನ್ನ ಸುತ್ತಲು, ಸೃಷ್ಟಿಸಿದ ಭೋಗ ಸೌಂದರ್ಯವನ್ನು ಕಣ್ಣೆತ್ತಿ ಸಹ ನೋಡಲಿಲ್ಲ. ಕುರುಡಿಯಂತೆ ಕಿವುಡಿಯಂತೆ ಹೊರಗನ್ನು ಮರೆತು ಪತಿಧ್ಯಾನ ನಿರತೆಯಾದಳು. ಹಾಸಿಗೆಯ್ನುನ್ನು ತಿರಸ್ಕರಿಸಿದಳು. ಮೀಯಲಿಲ್ಲ, ಉಡಲಿಲ್ಲ, ಮಂಡೆ ಬಾಚಲಿಲ್ಲ, ಆಕೆ ‘ಮುಕ್ತಿಯ ಪಾರುವ ಮುಮುಕ್ಷುವೋಲಿರ್ದಳಾ ಆರ್ಯೆ’ ಸೀತೆಯ ಸಾತ್ತ್ವಿಕ ಹಠದಿಂದ, ಕೋಪದಿಂದ ತಾಪದಿಂದ ಇದುವರೆಗೂ ಯಾರಿಗೂ ಕಿಂಚಿತ್ತು ತಲೆಬಾಗದ ಅಲ್ಲಾಡದ ರಾವಣ ಮೊದಲ ಬಾರಿಗೆ ಅಳುಕುತ್ತಾನೆ, ತಲ್ಲಣಗೊಳ್ಳುತ್ತಾನೆ. ಸೀತೆಯನ್ನು ಭೋಗದ ನೆಲೆಯಿಂದ ಎಲೆಮನೆಗೆ ಸ್ಥಳಾಂತರಗೊಳಿಸಲಾಗುತ್ತದೆ. ಅಲ್ಲಿನ ಪ್ರಕೃತಿಯ ಮಡಿಲಿನಲ್ಲಿ ಪ್ರಕೃತಿಯ ಸ್ವರೂಪಿಣಿಯೇ ಆದ ಸೀತೆಗೆ ಅಲ್ಲಿನ ಸೌಂದರ್ಯವನ್ನು ನೋಡಿ ಅವಳಲ್ಲಿ ನಂಬಿಕೆ ಮೂಡುತ್ತದೆ. ಆ ಅಶೋಕವನ ಅವಳ ಆತ್ಮೋದ್ಧಾರಕ್ಕೆ ಸೋಪಾನವಾಗುತ್ತದೆ.

‘ಮಿಂದಳಿಲ್ಲಾಕೆ;
ಮೇಣುಟ್ಟುದಂ ಬಿಟ್ಟು ಮಾರುಟ್ಟಳಿಲ್ಲಾಕೆ;
ಕೊಟ್ಟ ಪಣ್‌ಬೇರ್ಗಳಂ ವಿಶ್ವದೇವರ್ಕಳಿಗೆ
ನೈವೇದ್ಯಮಂ ಮಾಡುತುಂಡಳ್ ಪ್ರಸಾದಮಂ,
ಪ್ರಾಣೇಶನಾಗಮನದಾಶೆಯಿಂದನ್ನೆಗಂ
ಪ್ರಾಣಸಂಧಾರಣಾರ್ಥ, ಮತ್ತಮನವರತಮಾ
ರಾಮನಾಗಮನಕ್ಕೆ ರಾವಣೋಧ್ಧಾರಕ್ಕೆ
ಮೇಣಾತ್ಮಮಂಗಳಕೆ ಆ ದೇವಿ, ವೈರಮಂ
ಹಿಂಸೆಯಂ ತೊರೆಯಲೆಳಸುವ ತಪದ ಸಾಧನೆಗೆ
ಪ್ರಾರ್ಥನಾ ನಿರತಳಾದಳ್ ಶಿವನ ಸಫಲತೆಗೆ’[೧]



ವಾಲ್ಮೀಕಿಯ ಸೀತೆ ರಾಮಾಗಮನಕ್ಕೆ ರಾವಣವಧೆಗೆ ನೋಂಪಿಯನು ಕೈಗೊಳ್ಳುತ್ತಾಳೆ ವಿನಾ ರಾವಣನ ಉದ್ಧಾರಕ್ಕಾಗಿ ಪ್ರಾರ್ಥಿಸುವುದಿಲ್ಲ. ಪ್ರಕೃತಿ ಸ್ವರೂಪಿಣಿಯಾದ ಕುವೆಂಪು ಸೀತೆ ರಾವಣೋದ್ಧಾರಕ್ಕೆ ಪ್ರಾರ್ಥಿಸುತ್ತಾಳೆ. ಪತಿ ತನ್ನನ್ನು ಪುನೀತನನ್ನಾಗಿ ಪರಿವರ್ತಿಸುವ ತಪಸ್ಸನ್ನು ಆಕೆ ಕೈಗೊಳ್ಳುತ್ತಾಳೆ. ಮಂಡೋದರಿ ತನ್ನನ್ನು ಬೇಟೆಯಾಡುವುದಕ್ಕಿಂತ ಮುನ್ನವೇ ಸರ್ವರ ಹಿತವನ್ನು ಬಯಸುವ ಸೀತೆಯ ಹೃದಯದಲ್ಲಿ ರಾವಣನ ಉದ್ಧಾರಕಾಂಕ್ಷೆ ಮೂಡಿರುತ್ತದೆ. ಮಂಡೋದರಿಯನ್ನು ಸಂದರ್ಶಿಸಿದ ಅನಂತರ, ಅದು ಮತ್ತಷ್ಟು ಬಲಗೊಳ್ಳುತ್ತದೆ. ಕುವೆಂಪು ಸೀತೆ ಲೋಕಶಂಕರಿಯೇ ಹೊರತು ಲೋಕಭಯಂಕರಿಯಾಗುವುದಿಲ್ಲ.

ಮಂಡೋದರಿ ಪಾತ್ರದ ಮೂಲಕ ಸೀತೆಯ ಪಾತ್ರವನ್ನು ಕುವೆಂಪು ಮತ್ತು ಉಜ್ವಲಗೊಳಿಸುತ್ತಾರೆ. ವಾಲ್ಮೀಕಿಯ ಮಂಡೋದರಿ ಸೀತೆಯ ಬಗೆಗೆ ಯಾವುದೇ ಬಗೆಯ ಅನುಕಂಪೆಯನ್ನಾಗಲಿ ಗೌರವವನ್ನಾಗಲಿ ವ್ಯಕ್ತಪಡಿಸುವುದಿಲ್ಲ. ಆದರೆ ಕುವೆಂಪು ಮಂಡೋದರಿಗೆ ಸೀತೆಯ ಬಗ್ಗೆ ಅಪಾರ ಗೌರವ. ಸೀತೆಯನ್ನು ಕಾಣಲು ಮಂಡೋದರಿ ತವಕಿಸುವುದನ್ನು

---

[೧] ಅದೇ, ‘ಸಂಸ್ಕೃತಿ ಲಂಕ’ ಪುಟ ೩೨೬, ಸಾಲು ೧೮೧–೧೯೦.

ನೋಡಬಹುದು. ಕುವೆಂಪು ಅವರು ಮಾಡಿಕೊಂಡ ಈ ಮಾರ್ಪಾಡು ಮಂಡೋದರಿಯ ಪಾತ್ರವನ್ನೆಂತೋ ಅಂತೆಯೇ ಸೀತೆಯ ಪಾತ್ರವನ್ನು ಎತ್ತರಕ್ಕೊಯ್ಯುತ್ತದೆ. ಸೀತೆಯ ತಪಸ್ಸು ಆಕೆಯ ವ್ಯಕ್ತಿತ್ವವನ್ನು ವಿಕಸಿಸುವ ಪ್ರಕ್ರಿಯೆಯಲ್ಲೇ ತನ್ನ ವಲಯವನ್ನು ವಿಕಸಿಸುತ್ತದೆ. ಮಹಾವ್ಯಕ್ತಿಗಳು ತಮ್ಮ ಉದ್ಧಾರದ ಜೊತೆ ಜೊತೆಯಲ್ಲಿಯೇ ತಮ್ಮ ಪರಿಸರದ ಉದ್ಧಾರವನ್ನು ದೃಷ್ಟಿಯಲ್ಲಿಟ್ಟುಕೊಂಡಿರುತ್ತಾರೆ. ಇಂದಲ್ಲ ನಾಳೆ ತನಗೆ ಸೋಲುವಳೆಂದು ಬಗೆದಿದ್ದ ರಾವಣನ ಊಹೆ ಹುಸಿಯಾಗುತ್ತದೆ.

ಸ್ವಚ್ಛಂದವಾದ ಪ್ರಕೃತಿಯ ಮಡಿಲಿನಲ್ಲಿ ಸಾಗುತ್ತದೆ. ಸೀತೆಯ ಶುದ್ಧ ಸಾತ್ವಿಕ, ಆತ್ಮೋದ್ಧಾರಕ, ಪರೋದ್ಧಾರಕ ತೀವ್ರ ತಪಸ್ಸು ಈ ನಿಸರ್ಗ ದರ್ಶನದಿಂದ ತಪಸ್ಸಿನಿಂದ ಸೀತೆ ಯೋಗಿನಿಯೇ ಆಗುತ್ತಾಳೆ.

ನೋಡುತಿರೆಯಿರೆ, ಕೇಳುತಿರೆಯಿರೆ, ದೃಗಿಂದ್ರಿಯಕೆ
ಶ್ರವಣೇಂದ್ರಿಯಕೆ ಭೇದಮಳಿದತ್ತು, ಮೆಲ್ಲನೆಯ
ತೆರೆಯಾಗಿ, ಮೊರೆಯಾಗಿ, ತಿರೆಯೆಲ್ಲ ತಾನಾಗಿ,
ತನ್ನತನವನೆ ಮೀರಿ ನೆಗೆದುದು ಅತೀಂದ್ರಿಯಕೆ
ದೇವಿಯಾತ್ಮಂ[೧]

ಸತತ ತಪಸ್ಸಿನ ಫಲವಾಗಿ ಆಕೆಗೆ ಸಹಜವಾಗಿಯೇ ಅತೀಂದ್ರಿಯ ಸಿದ್ಧಿ ಲಭಿಸುತ್ತದೆ. ಸೀತೆಯ ಸಾತ್ವಿಕ ಗುಣದ ಕಾರಣದಿಂದಾಗಿಯೇ ರಾವಣನ ಬಗೆಗೆ ದ್ವೇಷ, ತಿರಸ್ಕಾರಗಳಿಗಿಂತ ಕರುಣೆ ಅನುಕಂಪಗಳು ಮೂಡುತ್ತವೆ. ತನ್ನನ್ನು ಪತಿಯಿಂದ ದೂರಮಾಡಿ, ತನ್ನವಳಾಗುವಂತೆ ಕಾಡಿದ ವ್ಯಕ್ತಿಯ ಮೇಲೆ ಸಹಜವಾಗಿಯೇ ಕೋಪತಾಪಗಳು ಉಂಟಾಗುತ್ತವೆ. ಆದರೆ ಸೀತೆ ಮಾತೃಸ್ಥಾನವನ್ನು ಪಡೆದುಕೊಂಡಿದ್ದರಿಂದ ತನ್ನ ವಾತ್ಸಲ್ಯವಲಯದೊಳಗೆ ರಾವಣನನ್ನು ಪರಿಗಣಿಸುತ್ತಾಳೆ. ತನ್ನನ್ನು ಪಡೆದುಕೊಳ್ಳಬೇಕೆಂದು ನಯ ವಿನಯಗಳ ಮೋಹಕ ಬಲೆಯನ್ನೊಡ್ಡಿದ್ದ ರಾವಣನಿಗೆ ಆಕೆ ಹೇಳುವ ಮಾತಿನಲ್ಲಿ ಅವಳ ಹೃದಯ ಸಂಸ್ಕಾರ ಎದ್ದು ಕಾಣುತ್ತದೆ.

"ಬಿದಿಯ ಬೇಳ್ವೆಗೆ ಬಂದ ಪಶು ನೀಂ, ದಶಗ್ರೀವ
ಮರುಗುವೆನು ನಿನಗೆ, ತಾಯ್ ಕೇಡಾಡಿ ಕಂದಂಗೆ
ಮರುಗುವೊಲ್, ನನ್ನ ಕಲ್ಲೆರ್ದೆ ಕರಗುತಿದೊ ನಿನಗೆ
ಮೆಲ್ಲತಪ್ಪುದು ದಿಟಂ! ನೀನೆಂದ ಮಾಳ್ಕೆಯಿಂ,
ಸಾಧನೆಗಸಾಧ್ಯಮಿಲ್ಲೆಂಬರ್ಯೆ ಉಪಾಸಿಸಲ್
ಕಲಾಂತರಕ್ಕೆ ಕಲ್ಲುಮೀಶ್ವರನ ಕೃಪೆಯಾಗಿ
ಪರಿಣಮಿಪುದೆಂತಂತೆ, ಕಾಲಾಯಸಕೆ ಸಮಾ
ನಿನ್ನ ಕಲ್ಲೆರ್ದೆ ಕರಗಿ ಮೆಲ್ಲಿತಪ್ಪುದು ದಿಟಂ!

[೧] ಅದೇ, 'ನಾನಕ್ಕನೆನ್ ನಿನಗೆ, ತಂಗೆ!' ಪುಟ ೨೯೧, ಸಾಲು ೯–೧೩.

ನೋಂತಿರ್ಪನನವರತಮಾತ್ಮದುದ್ಧಾರಕ್ಕೆ
ನಿನಗೆ! . . .”[1]

ಇಂಥ ಮಾತುಗಳ ಮೂಲಕವೇ ಸೀತೆ ರಾವಣನ ಮನಃ ಪರಿವರ್ತನೆಗೆ ಕಾರಣಳಾಗುತ್ತಾಳೆ. ಅವಳ ಅಂತರಂಗದ ಅವಿನಾಶಕಾರಿಯಾದ ಜಗದುದ್ಧಾರಕ ಆಧ್ಯಾತ್ಮತೇಜ ಅವನ ಮನಸ್ಸನ್ನು ಪ್ರವೇಶಿಸಿ ಅವನ ಭಾವನೆಗಳನ್ನು ಸೋಸುತ್ತದೆ. ಇದರ ಜೊತೆಗೆ ದಶಕಂಠನ ಹೃದಯದೇವಿ ಮಂಡೋದರಿಯ ಆತ್ಮದ ಆರ್ತಧ್ಯಾನವೂ ಬೆರೆತು ಆಕೆಯ ಶಕ್ತಿ ಇಮ್ಮಡಿಸುತ್ತದೆ.

ಕುವೆಂಪು ಕೈಯಲ್ಲಿ ಪಡಿಮೂಡಿದ ಮತ್ತೊಂದು ಸುಂದರ ಚಿತ್ರ. ಸೀತಾ–ಮಂಡೋದರಿಯರ ನಡುವಿನ ಬಾಂಧವ್ಯ. ಸೀತಾ ಮಂಡೋದರಿಯರ ಬೇಟೆಯ ಸಂದರ್ಭ ಅವರೀರ್ವರ ವ್ಯಕ್ತಿತ್ವಗಳ ಘನತೆ ಗೌರವಗಳನ್ನು ಉಜ್ವಲವಾಗಿ ಬೆಳಗಿಸುತ್ತದೆ. ಸೀತೆಯ ದರ್ಶನಕ್ಕಾಗಿ ಏಳು ಇರುಳು ದೂರದಲ್ಲೇ ನಿಂತು ಕಾದು ಪತಿಯ ಮಾತನ್ನು ಮೀರಿ ನಡೆಯಲಾರದೆ ಕೈಯೆತ್ತಿ ಮುಗಿದು ಮರೆಯಾಗುತ್ತಿದ್ದ ಮಂಡೋದರಿಯ ಬಳಿಗೆ ಸೀತೆ ತಾನಾಗಿಯೇ ಬರುತ್ತಾಳೆ. ಆಕೆ ರಾವಣನ ಸಾಮಾನ್ಯ ಸ್ತ್ರೀಯಲ್ಲ ಮಂಡೋದರಿಯೆಂಬುದನ್ನರಿತ ಕೂಡಲೇ ಅವಳ ಹೃದಯದಲ್ಲಿ ತೆಕ್ಕನೆ ಪೂಜ್ಯಭಾವ ಸ್ಫುರಿಸುತ್ತದೆ.

“ಪೆಸರಕ್ಷಿನ್ ದಿಟಂ
ಮುನ್ ಕೇಳ್ದೆನಾಂ ನಿನ್ನ ಬೆಳ್ಜಸವನೆಲೆ ಪೂಜ್ಯೆ;
ಕಂಡಿಂದು ಧನ್ಯೆಯನ್ ಪಿರಿಯಳ್ಗೆ ನಮಿಸುವೆನ್”
“ನಾನಸುರಿ, ನಮಿಸದಿರೆನಗೆ, ಆರ್ಯೆ!”
“ನೀನಸುರಿ?
ನೀನಸುರಿಯಲ್ತು; ದೇವತೆ, ಪತಿವ್ರತೆಯಾಗಿ
ನಮಗೆಲ್ಲಮಾದರ್ಶಮಾತೆ ನಿನಗಾಂ ನಮಿಸೆ
ಶೀಘ್ರದಿಂದೆನಗೆ ಮಂಗಳಮಪ್ಪುದೆಂದು ನಾಂ
ಬಲ್ಲೆನ್ . . .[2]

ಮಂಡೋದರಿಯ ಬೇಟಿಯಿಂದಾಗಿ ಸೀತೆಯ ತಪಸ್ಸು ಮತ್ತಷ್ಟೂ ಪುಷ್ಟಿಗೊಳ್ಳುತ್ತದೆ. ತನ್ನ ವ್ರತಕ್ಕೆ ಅದೇ ಉದ್ದೇಶದ ಮತ್ತೊಬ್ಬರ ವ್ರತನೆರವಾಗುವುದನ್ನು ತಿಳಿದು ಸೀತೆ ಹರ್ಷಚಿತ್ತಳಾಗುತ್ತಾಳೆ. ಮಂಡೋದರಿಯ ದೃಢತೆ ಅವಳ ಚಿತ್ತಕ್ಕೆ ಉಕ್ಕಿನ ಸಾಣೆಯಾಗುತ್ತದೆ. ತನ್ನ ದೇವರಿಗೆ ಮಣಿಯುವ ಮತ್ತೊಬ್ಬ ಭಕ್ತನನ್ನು ಕಂಡಾಗ ಭಕ್ತನ ಭಕ್ತಿ ಹುರಿಗೊಳ್ಳುವಂತೆ ಅವಳು ಹೊಂಪುಳಿಗೊಳ್ಳುತ್ತಾಳೆ. ಸೀತೆ–ಮಂಡೋದರಿಯರ ಬೇಟಿ ಕುವೆಂಪು ಕೈಯಲ್ಲಿ ಮಹತ್ವಪೂರ್ಣ ಚಿತ್ರವಾಗಿ ಮೂಡಿಬಂದಿದೆ. ಇಲ್ಲಿ ಸೀತೆಯ ನಯ, ವಿನಯ ಉದಾರತೆ ನಿರ್ಮೂಲತೆ ಸೂಕ್ಷ್ಮತೆ ಸಮಯಜ್ಞತೆಗಳು ಗೋಚರವಾಗುತ್ತವೆ. ರಾವಣನ ಬಗ್ಗೆ ಕೋಪಕ್ಕಿಂತ

[1] ಅದೇ, ‘ನಾನಕ್ಕನೆನ್ ನಿನಗೆ, ತಂಗೆ!’ ಪುಟ ೩೩೭, ಸಾಲು ೭೩–೮೨
[2] ಅದೇ, ಪುಟ ೩೪೦–೩೪೧, ಸಾಲು ೧೪೬–೧೫೦.

ಹೆಚ್ಚಾಗಿ ಆತನ ಮರುಳುತನಕ್ಕೆ ಮರುಕವಿದೆ ಎಂಬುದು ಮಂಡೋದರಿಯ ಜೊತೆಯಲ್ಲಿ ಅವಳಾಡುವ ಮಾತುಗಳಲ್ಲಿ ವ್ಯಕ್ತವಾಗುತ್ತದೆ.

. . . . ಸೆರೆಮನೆಯ ಆತ್ಮಸಾಧನೆಗೊಂದು
ಎಲೆಯ ಮನೆಯಾಯಿತು; ಪೌಲಸ್ತ್ಯಜನ ಲಂಕೆ
ಮಂಡೋದರಿಯ ಲಂಕೆಯಾಯಿತು; ಗಾವಣನ
ಮೇಲಿದದ ವೈರಭಾವಂ ಸುಲಭದಿಂ ಕರಗಿ
ಮಂಡೋದರಿಯ ಪತಿಯ ಮೇಲಣ ಕರುಣೆಯಾಯ್ತು;[೧]

ಇಂಥ ಸಂದರ್ಭಗಳಲ್ಲಿಯೇ ವಾಲ್ಮೀಕಿಯ ಸೀತೆಗೂ ಕುವೆಂಪು ಸೀತೆಗೂ ಇರುವ ಅಂತರ ನಮಗೆ ಗೋಚರವಾಗುವುದು. ರಾವಣನನ್ನು ಸಂಹಾರ ಮಾಡಬೇಕು ಎಂಬುದಕ್ಕಿಂತ ಹೆಚ್ಚಾಗಿ ರಾವಣನ ಆತ್ಮೋದ್ಧಾರವನ್ನು ಬಯಸುತ್ತಾಳೆ.

**ಲಂಕಾಸಂಪುಟ**

ನವ ಕುಸುಮ ತನ್ನ ಅರಳುವಿಕೆಯ ಜೊತೆಯಲ್ಲಿಯೇ ತನ್ನ ಸುತ್ತಲಿನ ಪರಿಸರವನ್ನು ಸುವಾಸನೆಗೊಳಿಸುವ ಹಾಗೇ, ಪಣತಿ ತನ್ನ ಪಾಡಿಗೆ ತಾನು ಉರಿದರೂ ಅದರ ದೀಪ್ತಿ ಎಲ್ಲವನ್ನು ವ್ಯಾಪಿಸಿಕೊಳ್ಳುವಂತೆ, ಭೂಜಾತೆ ಬಲವಂತದಿಂದ ಲಂಕೆಗೆ ಕಾಲಿಟ್ಟರು ಅವಳ ಸಾತ್ವಿಕ ತೇಜಸ್ಸಿನಿಂದಾಗಿ ಲಂಕೆಯ ಮಣ್ಣಿನಲ್ಲಿ ಪುಣ್ಯದ ಬೀಜಗಳು ಮೊಳಕೆಯೊಡೆದು ಚಿಗುರಲಾರಂಭಿಸುತ್ತವೆ. ಲಂಕೆಯ ಗಾಳಿ, ಬೆಳಕು, ನೀರುಗಳಲ್ಲಿ ಆದರ್ಶದ ಸತ್ವ ಬೆರೆಯುತ್ತದೆ. ಸೀತೆಯನ್ನು ಅರಸುತ್ತಾ ಲಂಕೆಯನ್ನು ಪ್ರವೇಶಿಸಿದ ಆಂಜನೇಯ ವಿಭೀಷಣನ ಗೃಹವನ್ನು ಪ್ರವೇಶಿಸಿದಾಗ ವೀಣೆ ನುಡಿಸುತ್ತಿದ್ದ ಅನಲೆಯ ಮನಸ್ಥಿತಿಗೆ ಸರಮೆಯಾಡುವ ಮಾತು ಸೀತೆಯ ಒಂದು ಪಾವಿತ್ರತೆಯ ಬೆಳಕು ಎಲ್ಲವನ್ನೂ ಎಲ್ಲರನ್ನೂ ಹೇಗೆ ಬೆಳಗುತ್ತಿತ್ತು ಎಂಬುದು ಗೋಚರವಾಗುತ್ತದೆ.

'ಅಶೋಕವನಿಕಾ ಮಧ್ಯೆ ರಾಮನ ತಪಸ್ವಿನಿಯ
ಕಂಡಾ ಮೊದಲ್ಗೊಂಡು ಮೇಣಾ ಮಹೀಯಸಿಯ
ವಾಗಮೃತಧಾರೆಯಂ ಸವಿದಾ ಮೊದಲ್ಗೊಂಡು
ಅನ್ಯಳಂತಿಹಳೆಮ್ಮ ಕನ್ಯೆ!''[೨]

ಮುಗ್ಧ ಕೋಮಲೆ, ಎಳೆತನದ ಬಾಲೆಯಾದ ಅನಲೆ ಸೀತಾ ಸಾನಿಧ್ಯದಿಂದ ಆಕೆಯ ದರ್ಶನದಿಂದ, ಸಂವಾದದಿಂದ ಪ್ರೌಢತೆ, ಗಾಂಭೀರ್ಯ ಚಿಂತನಶೀಲತೆಯನ್ನು ಬೆಳೆಸಿಕೊಳ್ಳುತ್ತಿರುವುದನ್ನು ಇದು ಸೂಚಿಸುತ್ತದೆ. ಮುಂದೆ ಆಕೆಯೇ 'ದೇವಿಯನ್, ಆ ನನ್ನ ಗುರುದೇವಿಯನ್' ಎನ್ನುತ್ತಾಳೆ ಮಂಡೋದರಿಗೆ ಸೀತೆ 'ಪೂಜ್ಯೆ' ಆಗುತ್ತಾಳೆ. ರಾವಣ ಕಾಮಾಸಕ್ತಿಯಿಂದ ತಂದ ಸೀತೆಯನ್ನು

[೧] ಅದೇ, ಪುಟ ೩೪೨, ಸಾಲು ೧೮೦–೧೮೪.
[೨] ಅದೇ, 'ಕನಕಲಂಕಾನ್ವೇಷಣಂ' ಪುಟ ೪೫೯, ಸಾಲು ೪೫೫–೪೫೮.

ಭೇಟಿ ಮಾಡುವಾಗ ಮಿಂದು, ಮಡಿಯುಟ್ಟು, ದೇಗುಲಕ್ಕೆ ನಡೆಯುವನಂತೆ ಬರುತ್ತಾನೆ. ರಾವಣನ ಮನದಲ್ಲಿ ಸೀತೆಯ ಬಗ್ಗೆ ಮೋಹದ ಬಲೆಯನ್ನು ಹೆಣೆದ ಚಂದ್ರನಖಿಯೇ ಅಣ್ಣನಿಗೆ ಹೀಗೆ ಹೇಳುತ್ತಾಳೆ.

ಸೀತೆ ಪೆಣ್ಣಲ್ತು
ನಮ್ಮೆನ್ನರೊಲ್, ದೈತ್ಯರಾಜೇಂದ್ರ ದೇವಿಯಯ್;
ನೀನಾಕೆಯಂ ಮೊದಲ್ ಕರದವೊಲ್ ಆ ಪೂಜ್ಯೆ
ದೇವಿಯೆ ದಿಟಂ!'[೧]

ತನ್ನ ಮೇಲೆ ಸೀತೆಯ ನೈತಿಕ ಪ್ರಭೆಯಿಂದ ಉಂಟಾದ ಪರಿವರ್ತನೆಯನ್ನು ಚಂದ್ರನಖಿ ತನ್ನ ಬಿಚ್ಚು ನುಡಿಯಲ್ಲಿ ವ್ಯಕ್ತಪಡಿಸುತ್ತಾಳೆ.

". . . . ಪಾಪಿ ನೀನ್ ಎನ್ನನುಂ ಪಾಪಕ್ಕೆ
ನೂಂಕಿದಯ್, ನಿನ್ನ ವೋಲೆನಗುಮಾ ಪಾಪಮೇ
ರುಚಿಯಾಯ್ತು, ಈ ಪೂಜ್ಯೆಯಿಂದರಿತೆ ಆ ರುಚಿ
ನರಕಮೆಂದು ಆ ಕೂಪಕಿನ್ನೆಂದುಮಿಳಿಯೆನಯ್
ನಿನ್ನನುಂ ಪ್ರಾರ್ಥಿಪೆನಿಳಿಯದಂತೆ!"[೨]

ಇಂಥ ತೇಜಸ್ಸನ್ನು, ಇಂಥ ಒಂದು ಆತ್ಮಶಕ್ತಿಯನ್ನು ಸೀತೆ ಗಳಿಸಿಕೊಳ್ಳಬೇಕಾದರೆ ಎಂಥ ಕಠಿಣ ತಪಸ್ಸನ್ನು ಆಕೆ ಕೈಗೊಂಡಿರಬಹುದು. ಆಕೆ ತನ್ನ ಕಾರ್ಯ ಸಾಧನೆಗಾಗಿ ಹೇಗೆ ತನ್ನ ದೇಹವನ್ನು ದಂಡಿಸಿದ್ದಳು ಎಂಬುದು ರಾವಣನ ಮಾತುಗಳಿಂದಲೇ ನಮಗೆ ತಿಳಿಯುತ್ತದೆ.

". . . . ಸೀತೆಯೋ ಪ್ರೇತವೋ ಪೇಳ್ ತ್ರಿಜಟೆ?
ನಿದ್ದೆ ಪಾಸುಣಿಸು ಮೀಹಂಗಳಾ ಕಾಣದೀ
ಪೆಣ್ ಪೆಣ್ಣೋ ಮೇಣ್ ಪೆಣ್ಣೊಡಲಿನಸ್ಥಿಪಂಜರವೋ"[೩]

ಹನುಮಂತನು ಸೀತೆಯನ್ನು ಮೊದಲು ಅಶೋಕವನದಲ್ಲಿ ನೋಡುವುದು ಈ ಸ್ಥಿತಿಯಲ್ಲಿಯೇ ಪತಿಯನ್ನು ಸೇರಬೇಕೆಂದು ಅವಳ ಕಠಿಣ ನೋಂಪಿಯಿಂದ ಆಕೆ ಹೇಗೆ ಕೃಶಳಾಗಿದ್ದಳು ಎಂಬುದನ್ನು ಹನುಮಂತನ ಬಾಯಿಂದಲೇ ತಿಳಿಯುತ್ತದೆ.

" . . . . ಅಯ್ಯೊದಾಶರಥಿ
ಬಣ್ಣಿಸಿದ ತನ್ನ ದಯಿತೆಯ ಚಿತ್ರವೆಲ್ಲಿ? ಈ
ದೀನ ದುಃಖಿನಿಯೆಲ್ಲಿ? ಬರ್ಣಿಸಿದ ಚೆಲ್ವೆಸೆವ
ಚಿತ್ರಪಟಮಂ ಮಸಿಯ ಕೈ ಹಿಸುಗಿ ಬಿಸುಟಂತೆ

---

೧ ಅದೇ, 'ಕಂಡನಾ ಹದಿಬದೆಯರಧಿದೇವಿಯಂ' ಪುಟ ೪೮೬ ಸಾಲು ೧೨೧-೧೨೪.
೨ ಅದೇ, ಪುಟ ೪೮೭, ಸಾಲು ೧೩೪-೧೩೮.
೩ ಅದೇ, ಪುಟ ೪೮೬, ಸಾಲು ೧೦೯-೧೧೧

ತೋರ್ಪಳೀ ಮಹಿಳೆ! ವಿಧಿಯ ನಿಷ್ಠುರ ಹೃದಯಮಂ
ಸುಡು ಸುಡು, ದಯಾಶೂನ್ಯಮಂ''[೧]

ಇವಳ ಕಠೋರ ತಪಸ್ಸು ತಿಮಿರವನ್ನು ನುಂಗಿ ಹಾಕುವ ದೀಪ್ತಿಯಾಗುತ್ತದೆ. ಕಠೋರ ಸಂಯಮದ ಮೂರ್ತಿಯಾಗಿ ಅನುದಿನವೂ ತಪಗೈವ ಜಾನಕಿಯ ಹೃದಯದಲ್ಲಿ ಕೇವಲ ತನ್ನ ಮಾನವನ್ನು ಮಾತ್ರ ಕಾಪಾಡಿಕೊಳ್ಳುವ ಕೃಪಣತೆಯಿರಲಿಲ್ಲ. ಇವಳ ಮಹಾತಪಸ್ಸು ಕೃಪಣತೆಯನ್ನು ಉದಾರತೆಯನ್ನಾಗಿ ಸ್ವಾರ್ಥವನ್ನು ನಿಸ್ವಾರ್ಥವನ್ನಾಗಿ ಶತ್ರುವನ್ನು ಸ್ನೇಹಿತನನ್ನಾಗಿ ಅವಗುಣಗಳನ್ನು ಸುಗುಣವನ್ನಾಗಿ ಪರಿವರ್ತಿಸುವ ಮಹಾಶಕ್ತಿಯಾಗಿ ಸೀತೆಯಲ್ಲಿ ಪರಿಣಮಿಸಿದೆ.

ಸೀತೆ ಸ್ವಭಾವತಃ ಸಹಶೀಲೆ, ಮೃದುಭಾಷಿಣಿ ಆದರೂ ತನ್ನ ವ್ಯಕ್ತಿತ್ವಕ್ಕೆ ಕುಂದಾಗುವಂತಹ ಮಾತುಗಳನ್ನು ಕೇಳಿ ತೆಪ್ಪಗಿರುವ ಸಾಮಾನ್ಯ ಸ್ತ್ರೀಯಲ್ಲ ಆಕೆ ದಿಟ್ಟೆಯಾಗಿ ಉತ್ತರ ನೀಡುತ್ತಾಳೆ.

ಪೇಳ್, ತ್ರಿಜಟೆ
ಪಿತ್ತೋತ್ಪನ್ನ ಜಲ್ಪಕುತ್ತರವಿದಂ ನಿನ್ನ
ಅನ್ನದಾತಂಗೆ, ಕತ್ತೆಯ ತತ್ತ್ವಮಂ ಕತ್ತೆ
ಕತ್ತೆಗಳ್ಗುಪದೇಶಿಸಲ್ವೇಳ್ಕುಮೆಲ್ಲದೆಯೆ
ಉತ್ತಮ ರಘುಕುಲೋತ್ತಮನ ಸತಿಯೆ ಮಂದದಂ
ಗಳಪಲ್ ಪ್ರಯೋಜನಮೆ? ಪ್ರತ್ಯುತ್ತರಕ್ಕಮೀ
ಅರ್ಹನಲ್ತಲ್ಪಾಸು! ಮರುಕಮಂ, ಕರುಣೆಯಂ
ವಿನಯಮಂ, ಸೌಜನ್ಯಮಂ ನಟಿಸುವೀ ನಟನ
ಶುನಕಾಭಿನಯಕೆ ಧಿಕ್; ಪುಸಿವೇಳ್ವ ನಾಲಗೆಗೆ
ಧಿಕ್! ಕೋಟಿಧಿಕ್! ಇವರ ಪೊಲೆಸಿರಿಗೆ ಧಿಕ್!
ಇವನ ಬಲ್ಮೆಗೆ ಲಕ್ಷಧಿಕ್! ಉಗುಳುಮಪವಿತ್ರಮಕ್ಕು,
ಈತಂಗೆ ಪೇಸಿ ಆ ದಿಕ್ಕಿಗೆಂಜಲನೆಸೆಯೆ ನಾಂ
ಶ್ರೀರಾಮಚಂದ್ರನೆಲ್ಲಿರ್ದೊಡಂ ನನಗೆ ಪತಿ!
ಶ್ರೀರಾಮನೆಂತಿರ್ದೊಡಂ ನನಗೆ ಪತಿ! ಸತ್ತೆನಾಂ
ಸೇರ್ದಪೆನಾತನೊಡನೆ! ಬದುಕಮೇಧಮೆ ದಿಟಂ
ಇನ್ನರಿಪೀ ಜಗದಿ! ಈ ಸೊಣಗಮರಿಯದಾ
ಭೀಮ ವಿಕ್ರಮಿ ರಾಮ ಮಹಿಮೆಯಂ ಬಲ್ಲೆನಾಂ[೨]

---

[೧] ಅದೇ 'ಅಶ್ರುಗಂಗೋತ್ರಿ' ಪುಟ ೪೯೭, ಸಾಲು ೩೨-೩೭.

[೨] ಅದೇ, 'ಕಂಡನಾ ಹದಿಬದಿಯರಧಿದೇವಿಯಂ' ಪುಟ ೪೮೯-೪೯೦, ಸಾಲು ೨೦೪-೨೧೯.

ರಾಮವಾರ್ತೆಯನ್ನು ಹೊತ್ತು ತಂದ ಹನುಮಂತನನ್ನು ಕಂಡು ಸೀತೆಯ ಸಂತೋಷಕ್ಕೆ ಪಾರವೇ ಇರಲಿಲ್ಲ. ರಾಮ ಹೇಗಿದ್ದಾನೆ? ಎಲ್ಲಿದ್ದಾನೆ? ಏಕೆ ತಡಮಾಡಿದ? ವಿರಹದುಃಖದಿಂದ ಕೃಶನಾಗಿದ್ದಾನೆಯೇ? ಶೋಕದಿಂದ ಬೆಂದಿದ್ದಾನೆಯೇ? ಎಂದು ಒಂದರ ಮೇಲೊಂದು ಪ್ರಶ್ನೆಗಳನ್ನು ಕೇಳುತ್ತಾಳೆ. ಸೀತೆ ರಾಮನಿಂದ ದೂರವಾದುದರಿಂದ ಅವನನ್ನು ಹೆಚ್ಚು ಆಳವಾಗಿ ಅರಿತುಕೊಳ್ಳಲು ಆರಾಧಿಸಲು ಪ್ರೀತಿಸಲು ಸಾಧ್ಯವಾಗುತ್ತದೆ. ಅಂತೆಯೇ ರಾಮನಿಗೂ ಸಹ ಸೀತೆಯಿಂದ ದೂರವಾದ್ದರಿಂದ ತಪಸ್ವಿಯಾಗಿ ತನ್ನನ್ನು ತಾನರಿಯಲು ಸಹಾಯಕವಾಗುತ್ತದೆ. ಜಾನಕಿರಾಮ ತನ್ನ ಸತಿಯಿಂದ ದೂರನಾಗಿ ಹೇಗಾಗಿದ್ದ ಎಂಬುದನ್ನು ಹನುಮಂತ ಸೀತೆಗೆ ತಿಳಿಸುವ ಸಂದರ್ಭದಲ್ಲಿ ವ್ಯಕ್ತವಾಗುತ್ತದೆ.

> "ನಿನಗಾಗಿ
> ರಾಮನಿಂದು ತಪಸ್ವಿ; ಮುಟ್ಟನಾ ಪಾರ್ಥಿವಂ
> ಮದ್ಯಮಾಂಸಂಗಳಂ ಕಂದಮೂಲಂಗಳಂ
> ಪಟ್ಟಲಂಗಳನುಂಡು ಬರ್ದುಕಿಹನ್, ಧ್ಯಾನದೊಳ್
> ಪೊಳ್ತುಗಳೆವನ್, ಶಕ್ತಿಯಾರ್ಜನೆಯ ಯೋಗದೊಳ್
> ಮುಳುಗಿರ್ಪನಾ ಪ್ರತಿಜ್ಞಾಭಿಷ್ಮ ತೇಜಸ್ವಿ!"[೧]

ಸೀತೆ ತನ್ನ ಮಂಗಳಕ್ಕಾಗಿ, ರಾಮಸಮಾಗಮಕ್ಕಾಗಿ, ರಾಮಲಕ್ಷ್ಮಣ ಕ್ಷೇಮಕ್ಕಾಗಿ, ರಾವಣೋದ್ಧಾರಕ್ಕಾಗಿ ಹಾಗೆಯೇ ಸರ್ವರುದ್ಧಾರಕ್ಕಾಗಿ ತಪಸ್ವಿಯಾಗುತ್ತಾಳೆ. ತನ್ನ ತಪಸ್ಸಿನ ತೇಜದೊಳಗೆ ಒಳಗೊಳ್ಳುವ ಮಹಾಶಕ್ತಿಯಾಗುತ್ತಾಳೆ.

ಹನುಮಂತ ಈ ಕ್ಷಣದಲ್ಲಿಯೇ ರಾಮನ ಬಳಿಗೆ ಕರೆದೊಯ್ಯುತ್ತೇನೆ. ಎಂದು ಬೆನ್ನಮೇಲೆ ಕುಳಿತುಕೊಳ್ಳಲು ಹೇಳಿದಾಗ ಸೀತೆ ಸಾತ್ವಿಕವಾಗಿ ತಿರಸ್ಕರಿಸುತ್ತಾಳೆ. ಮುಂದಾಗಬಹುದಾದ ಒಳಿತು-ಕೆಡಕುಗಳ ಬಗ್ಗೆ ಆಕೆ ಯೋಚಿಸುತ್ತಾಳೆ. ಇಲ್ಲಿ ಕೇವಲ ರಾವಣನ ಉದ್ಧಾರ ಮಾತ್ರವಲ್ಲ, ಇಡೀ ಲಂಕೆಯೇ ರಾಮನ ಪಾದಸ್ಪರ್ಶದಿಂದ ಪಾವಿತ್ರ್ಯವನ್ನು ಪಡೆದುಕೊಳ್ಳಬೇಕೆಂದು ಹಂಬಲಿಸುತ್ತಾಳೆ.

> "ದಶಗ್ರೀವಗೆಂತಂತೆ ಬಹುಜನರ್ಗಿರ್ಪುದಯ್
> ಬಹುವಿಧದಿ ಸಮೆಯಲಿಹ ಬಹುಜನ್ಮಕರ್ಮಗಳ
> ಪೊಲೆಕೆಲ್ಬಿಷಂ. ಸರ್ವರಾ ಸರ್ವ ಕರ್ಮಗಳ
> ಪಾಸುಪೊಕ್ಕಿನ ಜಟಿಲ ಜಾಲಮೆ ಕೃತಿಪುದಲ್ತೆ
> ನಡೆವಿ ಜಗನ್ನಾಟ್ಯಮಂ![೨]

---

[೧] ಅದೇ, 'ಅಶ್ರುಗಂಗೋತ್ರಿ' ಪುಟ ೫೧೦, ಸಾಲು ೩೮೩, ೩೮೮.
[೨] ಅದೇ, ಪುಟ ೫೧೭, ಸಾಲು ೫೫೮-೫೬೨.

ಹನುಮಂತನಿಗೆ ಕೇಡಾಗದಂತೆ ಹರಸಿ ಬೀಳ್ಕೊಡುತ್ತಾಳೆ. ರಾಮವಾರ್ತೆಯನ್ನು ತಿಳಿದ ಸೀತೆ ಹಿಂದೆಂದೂ ತಿಂದಿರಲಾರದಷ್ಟು ಹಣ್ಣನ್ನು ತಿಂದು ತಣಿಯುತ್ತಾಳೆ.

ಸೀತೆಯ ಕಠಿಣ ತಪಸ್ಸು ರಾವಣನನ್ನು ಶಕ್ತಿಗುಂದುವಂತೆ ಮಾಡುತ್ತದೆ. ಅವನಾಡುವ ಈ ಮಾತುಗಳು ಸೀತೆಯ ಚಾರಿತ್ರಕ್ಕೆ ಹಿಡಿದ ಕನ್ನಡಿಯಂತಿದೆ.

ವಾನರರ ಪಡೆಯೊಳೂರ್ವನುಮುಳಿಯದೋಲಂತೆ
ಕೊಲ್ವ ಕಷ್ಟಂ ತೃಣಂ, ಪರ್ವತಂ, ಶಾರ್ದೂಲ, ಕೇಳ್
ಪರ್ವತ ಸೀತಾವ್ರತಂ! ಆರಜತ ಶೈಲಮಂ,
ಶಿವ ಶಿವಾಣಿಯರೊಡನೆ, ಬೇರ್ ಬಿಡಿಸುತಳ್ಳಾಡಿ
ನೆಗಹಿದೀ ದೈತ್ಯರ ದೊರೆಯ ತೋಳ ಸ್ಥಿರಾತ್ಮಜೆಯ
ಹೃದಯದುದ್ಯಾನದೊಳ್ ಉದಿರ್ದೊಂದು ಪೂವೆಸಳ
ಪೊರೆಗುರುಳುದು ಸೋಲ್ತು, ಪಿಂತೆ ಹರಧನುವೆತ್ತಿ
ಕೆಡೆದಂತೆ![೧]

ರಾವಣನಂಥ ಮಹಾ ಪರಾಕ್ರಮಿಗೆ ರಾಮಸೇನೆಯನ್ನು ಗೆಲ್ಲುವುದು ಅಂಥ ಅಸಾಧ್ಯದ ಮಾತಾಗಿರಲಿಲ್ಲ. ಆದರೆ ಆ ಸೇನೆಗೆ ಅಂಥ ಆತ್ಮಶಕ್ತಿಯನ್ನು ತಂದುಕೊಟ್ಟಿದ್ದು ಸೀತೆಯ ಕಠಿಣ ನೋಂಪಿ. ಸೀತೆಯ ವ್ರತ ಎಷ್ಟು ಅಚಲ, ನಿರ್ಮಲ, ಅನುಪಮ ಎಂಬುದು ಆಕೆಯ ಮನಸ್ಸನ್ನು ಗೆಲ್ಲಲು ಪಣತೊಟ್ಟು ಹೆಜ್ಜೆಹೆಜ್ಜೆಗೂ ಸೋತು ತನ್ನ ಮನದ ಕಿಲ್ಬಿಷವನ್ನು ಆಕೆಯ ಆತ್ಮದೀಧಿತಿಯಿಂದ ಸ್ವಲ್ಪ, ಸ್ವಲ್ಪವಾಗಿಯೇ ಕಳೆದುಕೊಂಡ ರಾವಣನಿಗೆ ಅರಿವಿದೆ. ರಾವಣನಲ್ಲಿ ಈಗ ಸೀತೆಯ ಬಗ್ಗೆ ಕೇವಲ ಕಾಮಾಸಕ್ತಿಯಾಗಿ ಉಳಿದಿಲ್ಲ; ಅದು ಈಗ ಆತ್ಮಮೋಹವಾಗಿ ಉಳಿದಿದೆ. ಜಾನಕಿಯ ಮೇಲಣ ಮೋಹವೆಲ್ಲ ರಣದ ಮೋಹವಾಗಿದೆ. ಆದ್ದರಿಂದ ಈ ಪ್ರಯತ್ನ ಅವನ ಪಾಲಿಗೆ 'ತಪಸ್ಸಾಧನ'. ರಾವಣನಂಥ ಮಹಾಕಾಮಿ, ಲೋಕಭಯಂಕರನ ಮೋಹವನ್ನು ಆತ್ಮದರ್ಶನದ ತಪಸ್ಸಾಗಿ ಪರಿವರ್ತಿಸಿದ ಹಿರಿಮೆ ಈ ಸೀತೆಯದು ಎಂಬುದನ್ನು ಈ ಕಾವ್ಯ ಮತ್ತೆ ಮತ್ತೆ ಸಮರ್ಥಿಸುತ್ತಾ ಹೋಗುತ್ತದೆ.

ಇಂದ್ರಜಿತು ನಾಗಾಸ್ತ್ರವನ್ನು ಪ್ರಯೋಗಿಸಿ ಎಲ್ಲರನ್ನು ವಿಷಮೂರ್ಛೆಗದ್ದಿದಾಗ ಸ್ವಪ್ನಲಕ್ಷ್ಮಿ ತಪೋಲಕ್ಷ್ಮಿಯರು ನಡೆಸುವ ಸಂವಾದದಲ್ಲಿ ಸೀತಾದೇವಿಯ ತಪೋಮಹಿಮೆಯಿಂದಾಗಿ ರಾಘವಧ್ವಜನಿ ವಿಷಾಸ್ತ್ರಮುಕ್ತವಾಗುವ ದೇವತೆಗಳು ಅವನಿಗೆ ಸಹಾಯವೆಸಗುವ ಸಂಗತಿಗಳು ವ್ಯಕ್ತವಾಗುತ್ತದೆ. ದ್ವಿತೀಯ ದಿನದ ರಣವೂ ರಾವಣನ ಪಾಲಿಗೆ ವ್ಯಥೆಯ ದಿನವೇ ಆಗಿರುತ್ತದೆ. ಈ ಸಂದರ್ಭದಲ್ಲಿ ಮಂಡೋದರಿ ಪತಿಗೆ ಉಣಲಿಕ್ಕೆ ಸೀತೆಯ ಮಾತು ತೆಗೆಯುತ್ತಾಳೆ. ತಾನು ಕನಸಿನಲ್ಲಿ ವೇದವತಿ ಚಿತೆಯೇರಿದುದನ್ನು ಅಭಸ್ಮರಾಶಿಯಿಂದ 'ಮಹಾತಪಸ್ವಿನಿ ಸೀತೆ' ಉದ್ಭವಿಸಿದುದನ್ನು ಕಂಡೆನೆಂದು ಹೇಳಿದಾಗ ಸೀತೆಯ ವ್ಯಕ್ತಿತ್ವವನ್ನು ಸಾಂಕೇತಿಕವಾಗಿ ಅನಾವರಣಗೊಳಿಸುವ ಮಹತ್ವದ ಚಿತ್ರವನ್ನು ಮಂಡೋದರಿ ಅವನ ಮುಂದೆ ಚಿತ್ರಿಸುತ್ತಾಳೆ.

---

೧ ಅದೇ, 'ಸೈನ್ಯಗುಪ್ತಿ' ಪುಟ ೬೧೫, ಸಾಲು ೫೫-೬೨.

"ದೇವಿ ಕಣ್ಮುಚ್ಚದೆಯೆ
ಭೀಷ್ಮ ಮೌನವನಾಂತು ತನ್ನೊಳಗೆ ತಾಂ ಪೊಕ್ಕ
ಯೋಗಿನಿಯವೋಲಿರಲ್ ಕಂಡುದನಲೆಯ ಕಣ್ಗೆ
ಪರ್ಣಶಾಲೆಯ ತುಂಬಿದೊಂದನುಪಮ ಜ್ಯೋತಿ,
ರೋಮಾಂಚ ಕಂಚುಕಿತ ಗಾತ್ರ ನೋಡುತ್ತಿರಲ್,
ಬಾಹ್ಯ ಸಂಜ್ಞಾಶೂನ್ಯ ಆ ಸೀತೆ ತೊಡಗಿದಳಾರೂ
ನುಡಿಸಿದವೊಲಾಗಿ ಸಂವಾದಮಂ, ಆ ಪೂಜ್ಯೆ
ಅಲ್ಲಿರ್ದುಮೆಲ್ಲೆಲ್ಲಿಯುಂ ಚರಿಸುತಿರ್ದಂತೆ,
ಅಲ್ಲಿರ್ದುಮೆಲ್ಲಮಂ ಕಾಣುತಿರ್ದಂತೆ, ಮೇಣ್
ಅಲ್ಲಿ ತಾಟಸ್ಥ್ಯಮಂ ತಾಳ್ದಳೋಲಿರ್ದೋಡಂ
ದೂರಮಿರ್ದ್ದಿತರರ ಜಗತ್‌ಕ್ರಿಯಾಚಕ್ರಮಂ
ನಡೆಪ ವೋಲಾಚರಿಸುತಿರ್ದಳಂ ಕಂಡನೆಲೆ
ಮೆಯ್ಮರೆತಳಂತೆ ಭಯರಸವಶೆ!"[1]

ಒಂದು ಮನುಷ್ಯ ಜೀವ ತನ್ನ ತಪಸ್ಶಕ್ತಿಯಿಂದ ತನ್ನ ಸಾಧನ ಬಲದಿಂದ ಎಂಥ ಅದ್ಭುತ ಚೈತನ್ಯವನ್ನು ಪಡೆಯಬಹುದೆಂಬುದನ್ನು ಇಂಥ ಸನ್ನಿವೇಶದಿಂದ ಮನಗಾಣಬಹುದು. ಸೀತೆ ಯೋಗಿನಿ ಮಾತ್ರವಲ್ಲ ಸರ್ವವ್ಯಾಪಿಯೂ ಸರ್ವಸಾಕ್ಷಿಯೂ ಸರ್ವಶಕ್ತಿಯೂ ಜಗತ್ ಕ್ರಿಯಾನಿಯಾತ್ರಕಳೂ ಆಗಿ ತನ್ನ ತಪೋಬಲದಿಂದ ಪರಿವರ್ತಿತಳಾಗಿದ್ದಾಳೆ ಎಂಬುದನ್ನು ಇದು ಧ್ವನಿಸುತ್ತದೆ.

**ಶ್ರೀಸಂಪುಟ**

ದರ್ಶನದ ಕೊನೆಯ ಸಂಪುಟ ಸೀತೆಯ ಮಹಿಮೆಯನ್ನು ಸಾರುವ, ಆಕೆಯ ಔನತ್ಯವನ್ನು ಸ್ಥಾಪಿಸುವ ಶ್ರೀಸಂಪುಟವಾಗಿಯೇ ರೂಪುಗೊಂಡಿದೆ. ಶ್ರೀಸಂಪುಟದ ಆರಂಭದಲ್ಲಿ ಯುದ್ಧದಲ್ಲಿ ಗಾಯಗೊಂಡ ರಾವಣನ ಸೇನಾನಿ ಮಹಾಪಾರ್ಶ್ವ ತನ್ನ ಅವಸಾನದ ಕಾಲದಲ್ಲಿ ಸೀತೆಯ ಮಹಿಮೆಯನ್ನು ಆಕೆಯ ಪ್ರಭಾವದ ಪರಿಣಾಮವನ್ನು ಸ್ವಾನುಭವದಿಂದ ತನ್ನ ಸಾರಥಿಗೆ ತಿಳಿಸುತ್ತಾನೆ.

"ಬಹುಪತಂಗಳ್ ವಿಧಿಗೆ
ತನ್ನಯ ಕಾರ್ಯಸಾಧನೆಗೆ, ನನ್ನಿಷ್ಟದೇವತೆಯೆ
ಸೀತಾ ಸ್ವರೂಪದಿಂ ಮೋಹಿಸಿದಳೆಂಬಂತೆ
ತೋರುತಿದೆ ಲಂಕಾಧಿನಾಥನಂ ಅಲ್ಲದಿರೆ
ಲಭಿಸುತಿರ್ದುದೆ ನನ್ನ ಸಾಧನೆಗಿನಿತು ಶೀಘ್ರದಿ
ಮರಣ ತೋರಣದಾಚೆ ಗೋಚರಿಪಮುರ ಸಿದ್ಧಿ?"[2]

---

[1] ಅದೇ, 'ಅದ್ವಿತೀಯಮಾ ದ್ವಿತೀಯಾಂ ದಿನಂ' ಪುಟ ೧೪೯–೫೦, ಸಾಲು ೩೧೦–೩೨೨.

[2] ಅದೇ, 'ಕುಂಭಕರ್ಣನನೆಬ್ಬಿಸಿಮ್' ಪುಟ ೧೧೨, ಸಾಲು ೭೯–೮೪.

ಪರೋಕ್ಷವಾಗಿ, ಪ್ರತ್ಯಕ್ಷವಾಗಿ ಎಲ್ಲರ ಮನಪರಿವರ್ತನೆಗೆ ಕಾರಣಳಾದ ಸೀತೆ ದೈವಾಂಶ ಸಂಭೂತೆ. ತನ್ನ ನೇತ್ರವಲಯದಲ್ಲಿ ಮನೋವಲಯದಲ್ಲಿ ಒಳಗಾದವರೆಲ್ಲರಿಗೂ ಅವರವರ ಸ್ವಶಕ್ತಿಯ ದೌರ್ಬಲ್ಯದ ಅರಿವನ್ನುಂಟು ಮಾಡಿ ಅವರ ಅಂತರಂಗದಲ್ಲಿ ಸುಪ್ತವಾಗಿದ್ದ ಸತ್ ಚಾರಿತ್ರ್ಯವನ್ನು ಪೋಷಿಸಿ ಪ್ರಜ್ವಲಿಸಿ ಅವರಾತ್ಮಗಳನ್ನು ಮುಕ್ತಿಯ ಮಹಾನೆಲೆಗೆ ತಂದ ಸೀತೆ ದೈವಾಂಶಸಂಭೂತಳೆಂಬುದನ್ನು ಪರಶಿವನೇ ಪಾರ್ವತಿಗೆ ಹೇಳುತ್ತಾನೆ.

ನಿನ್ನಂಶಮಾ ಸೀತೆ, ನಿನ್ನ ಭಕ್ತರ್ ದೈತ್ಯ
ಸೋದರರ್, ನೀನೆ ಸಮ್ಮೋಹಿಸಿಹೆ ರಾವಣನ
ಮತಿಯನವನಿಷ್ಟಸಿದ್ಧಿಗೆ ಸಾಧನವನೊಡ್ಡಿ,[೧]

ಸಾಕ್ಷಾತ್ ಪಾರ್ವತಿಯ ಅಂಶವಾದ ಸೀತೆ ಅದ್ಭುತ ಶಕ್ತಿಸಂಪನ್ನೆಯಾಗಿಯೂ ಅಷ್ಟೇ ಸರಳ ಹೃದಯಿಯೂ ಪರಾನುಕಂಪೆಯುಳ್ಳವಳೂ ಆಗಿದ್ದಾಳೆ; ತ್ರಿಜಟೆ ತನ್ನವರಿಗಾದ ದಾರುಣಸ್ಥಿತಿಯನ್ನು ಬಣ್ಣಿಸಿ, ತನ್ನ ಪತಿಗೊದಗಬಹುದಾದ ದುಸ್ಥಿತಿಯ ಬಗ್ಗೆ ತಿಳಿಸಿದಾಗ ಸೀತೆಯ ಅಂತರಾಳದಿಂದ ಉದಿಸಿದ ಮಾತುಗಳು ಇವು,

"ತ್ರಿಜಟೆ,
ನೀನೆಂದವೊಲೆ ನನಗುಮೊಮ್ಮೆಮ್ಮೆ ತೋರ್ಪುದವ್
ಲೋಕ ಸಂಕಟಕಲ್ಲ, ನಿನತೊಂದಕೆಯ ಅಲ್ತು,
ನಾನೆ ಕಾರಣಮೆಂಬವೊಲ್, ಜನಕ ಭೂಮಿಪಂ
ಭೂಮಿಗರ್ಭದಿನೆನ್ನನಲ್ತು ಲೋಕದ ಸಕಲ
ಶೋಕಮಂ ಪಡೆದು ರಾಮಂಗಿತ್ತು, ಲಂಕೆಯಿಂ
ತೊಟ್ಟಯೋಧ್ಯೆಯವರೆಗೆ ದುಃಖಕುಯ್ಯಲೆಯಾಡೆ
ತೂಗುಮಂಚವನಿಕ್ಕಿದನು![೨]

ತನ್ನ ಪರಿಸರದಲ್ಲಿ ಉಂಟಾದ ಎಲ್ಲರ ಶೋಕಕ್ಕೆ ತಾನೆ ಕಾರಣಳೆಂದು ದುಃಖಿಸುವ ಆತ್ಮನಿಂದನೆಯನ್ನು ಮಾಡಿಕೊಳ್ಳುವ ಸೀತೆ ಮರುಕ್ಷಣದಲ್ಲೇ ತ್ರಿಜಟೆಯ ತಾಳಿ ಭಾಗ್ಯಕ್ಕೆ ತನ್ನ ಪತಿಯಿಂದ ಯಾವ ತೊಂದರೆಯು ಬಾರದಂತೆ ಹರಸಿ ತನ್ನ ಅತಿಮಾನವ ಶಕ್ತಿಯನ್ನು ಪ್ರದರ್ಶಿಸುತ್ತಾಳೆ. ಇಂಥ ಸೀತೆಯ ಸಾನಿಧ್ಯದ ಪ್ರಭಾವದಿಂದ ತ್ರಿಜಟೆಯಂಥ ಸಾಮಾನ್ಯ ಮುಗ್ಧರಕ್ಕಸ ಸ್ತ್ರೀ ಕೂಡ ಜ್ಞಾನಿಯಾಗುತ್ತಾಳೆ. ತ್ರಿಜಟೆಯಾಡಿದ ನುಡಿಗೆ ಅಚ್ಚರಿ ವ್ಯಕ್ತಪಡಿಸಿದ ಸೀತೆಗೆ ಆಕೆಯಾಡುವ ನುಡಿಗಳಿವು;

"ನೀನೆ ಗುರುವಲ್ತೆ?"
ತ್ರಿಜಟೆಯಿಂದಲ್ ಧನ್ಯಭಾವದಿಂ "ನಿನ್ನೊಡನೆ

---

[೧] ಅದೇ, 'ರಸಮಲ್ತೆರುದ್ರದೃಷ್ಟಿಗೆ ರೌದ್ರಮಂ' ಪುಟ ೬೭೭, ಸಾಲು ೩೬-೩೮.
[೨] ಅದೇ, 'ದೂರಮಿರದಿನ್‌ಸುಗತಿ' ಪುಟ ೬೯೮-೬೯೯, ಸಾಲು ೬೬-೭೨.

ಇನಿತು ದಿನಮಿರ್ದು ನಿನ್ನಂ ಸೇವೆಗೆಯ್ದುದೇನ್
ಬರಿಯ ದಾಸ್ಯಮೇ? ತಪಂ ತಾನಲ್ತೆ? ನುಡಿಗೇಳ್ದು
ನಡೆನೋಳ್ದು, ಸಾನಿಧ್ಯದೊಳೆ ಪಗಲಿರುಳುಮಳ್ದು,
ಪೂರ್ವಜನ್ಮದ ಪುಣ್ಯಫಲದಿ ನಿನ್ನನ್ನರಿವ
ಕೃಪೆಯೊದಗಿದೆನಗೆ, ಪೇಳ್ ಅಂತುನುಡಿವನಿತದೇನ್
ಪಿರಿದೆ?''[೧]

ಸೀತೆಯ ಸತ್ ಚಾರಿತ್ರ್ಯದ ಪ್ರಭಾವಕ್ಕೆ ಒಳಗಾದ ಇನ್ನೊಂದು ಪಾತ್ರ ಧಾನ್ಯಮಾಲಿನಿ, ಯಾವುದೋ ದುರ್ಬಲಗಳಿಗೆಯಲ್ಲಿ ಕ್ಷಣಿಕ ಮೋಹಕ್ಕೆ ಒಳಗಾಗಿ ರಾವಣನಿಗೆ ಸೋತು ಅತಿಕಾಯನೆಂಬ ಮಹಾಶೂರನನ್ನು ಪಡೆಯುತ್ತಾಳೆ. ತಾನು ಮಾಡಿದ ಘೋರಾಪರಾಧದ ಅರಿವು ಅವಳಿಗಾದದ್ದು ಸೀತಾದರ್ಶನದ ಅನಂತರವೇ, ಸೀತೆಯಂಥ ಶುದ್ಧ ಚಾರಿತ್ರ್ಯದ ಪ್ರಜ್ವಲ ತಪಸ್ವಿಯನ್ನು ಕಂಡ ಕೂಡಲೇ ಆಕೆಗೆ ಆತ್ಮಾವಲೋಕನ ಆರಂಭವಾಗುತ್ತದೆ, ತನ್ನ ಪತನ ಪ್ರಪಾತದ ಆಳದ ಅರಿವಾಗುತ್ತದೆ. ಮೈಮನಸುಗಳೆರಡೂ ಒಂದೇ ಎಂದು ಮೋಹ ತೀವ್ರತೆಯ ಕಾವಿನಲ್ಲಿ ಭಾವಿಸಿದ್ದ ಆಕೆಗೆ ಮೈಗಿಂತ ಬೇರೆಯಾಗಿ ಮನಸಿದೆ ಎಂಬ ಪ್ರಜ್ಞೆ ಮೂಡುತ್ತದೆ. ಆ ಮನಸ್ಸು ಜಾನಕಿಯನ್ನು ಗುರುವಾಗಿ ಸ್ವೀಕರಿಸುತ್ತದೆ. ತನ್ನ ಅವಸಾನ ಸಮಯದಲ್ಲಿ ಮಾನಸಿಕವಾಗಿ ಪತಿದರ್ಶನ ಮಾಡಿದ ಆಕೆ ಆಡುವ ಮಾತುಗಳು ಸೀತಾ ಶಕ್ತಿದ್ಯೋತಕವಾಗಿ ಮೂಡಿಬಂದಿವೆ.

ಸೀತೆಯಂ, ಪೂಜ್ಯಯಂ, ಆಲೋಕಮಾತೆಯಂ
ಪಶುರಾಕ್ಷಸಂ ಮುಟ್ಟಿ ಪೊತ್ತು ತಂದಾ ಕತದಿನ್
ಅಪವಿತ್ರಳಾದಳೇನಾ ಪತಿವ್ರತೇ? ಸ್ವಾಮಿ,
ನನ್ನ ಮುಡಿಯಂ ನೋಡು, ನಿಚ್ಚಮುಂ ತ್ರಿಜಟೆಯಿಂ
ನಾಂ ಪಡೆದು ಮುಡಿದ ರಘುರಾಮನ ಮಡದಿಯಡಿಯ
ಪಾಪನಾಶಕ ಧೂಳಿ! ಏನೊ ದುಃಸ್ವಪ್ನದೊಳ್
ಪ್ರಾರಬ್ಧ ಕರ್ಮಪರಿಪಾಕದಿಂದಗಲಿದೆವು
ನೀನುನಾನ್, ಆ ಸ್ವಪ್ನಮೊಡೆದುದಿನ್! ಅದಕ್ಕಾಗಿ
ಆ ದೇವಿ ರಾಮಸತಿಗಿದೊ ಶತ ನಮಸ್ಕಾರಗಳು''[೨]

ಸೀತೆ ತನ್ನ ಕಠಿಣ ಉಜ್ವಲ ತಪಸ್ಸಿನಿಂದ ಅದ್ಭುತ ಶಕ್ತಿಗಳನ್ನು ಪಡೆದುಕೊಂಡು ಬೇರೆ ಬೇರೆ ವ್ಯಕ್ತಿಗಳಿಗೆ ಅವರವರ ಭಾವಕ್ಕೆ ದೃಷ್ಟಿಗೆ ಸಾಧನೆಗೆ ತಕ್ಕಂತೆ ಬೇರೆ ಬೇರೆಯಾಗಿ ದರ್ಶನ ನೀಡುವ ಮೂಲಕ ಅವರ ಮನದ ಕಾಳಿಕೆಯನ್ನು ಕಳೆದು ಆತ್ಮೋದ್ಧಾರದ ಪರಮ ಮಂಗಳ ಪಥವನ್ನು ಅವರಿಗೆ ತೋರಿಸುತ್ತಾಳೆ. ಸೀತೆಯ ಲೋಕಮೋಹಕ ಸೌಂದರ್ಯದ ಬಯಕೆಯಿಂದಲೇ

---

[೧] ಅದೇ, 'ದೂರಮಿರದಿನ್ ಸುಗತಿ' ಪುಟ ೭೦೦, ಸಾಲು, ೯೬–೧೦೨.
[೨] ಅದೇ, 'ನೀಂ ಮಹಚ್ಛೈಲ್ಪಿದಿಟಂ! ಪುಟ ೭೩೫–೭೩೬, ಸಾಲು ೧೦೧–೧೦೯.

ಅವಳನ್ನಪಹರಿಸಿ ತಂದ ರಾವಣ ಅವಳ ಆತ್ಮಸೌಂದರ್ಯದ ಅನುಭವವಾಗುತ್ತಲೇ ತನ್ನ ಲೋಕಬಯಕೆಯನ್ನು ದಿವ್ಯಬಯಕೆಯನ್ನಾಗಿ ಅಪ್ರಜ್ಞಾಪೂರ್ವಕವಾಗಿಯೇ ಪರಿವರ್ತಿಸಿಕೊಳ್ಳುತ್ತಾ ಹೋದನಾದರೂ ಅಶೋಕವನದಲ್ಲಿ ಆತ ಅದ್ಭುತ ದೃಶ್ಯವನ್ನು ಕಾಣುತ್ತದೆ.

"ಪರ್ಣಶಾಲೆಯಂ
ಪೊತ್ತಿರ್ದುದೊಂದದ್ಭುತ ಚಿತಾಗ್ನಿ, ಕಂಡನಾ
ಕೆಂಡದುರಿ ನಡುವೆ ಕುಣಿದಿರ್ದ ರಣಚಂಡಿಯಂ!
ಮಡಿದ ಲಂಕಾವೀರ ಶತರುಂಡಮಾಲೆಯಂ
ತೊಟ್ಟಿರ್ದುಳುಟ್ಟಿರ್ದಳಾ ಮುಂಡಂಗಳಂ ನೆಯ್ದು
ಕೈಗಯ್ದ ಕಟಿವಸ್ತ್ರಮಂ! ನೋಡುತಿರೆ ನೃಪಂ,
ಗುರುತಿಸಿದನವುಗಳಂ: ಕುಂಭಕರ್ಣನ ಶಿರದಿ
ಪಕ್ಕದೊಳೆ ಕಂಡು ರಕ್ತಾರ್ದ್ರಭೀಕರಮಾದ
ತನ್ನ ಪಂದಲೆಯಂ ದಶಾನನಂ ಹಮ್ಮೈಸಿ
ಕಣ್ಮುಚ್ಚಿದನ್! . . . ತಂದೆನೇ ಸುಂದರಿಯ ರೂಪದೀ
ಸೀತಾ ಸ್ಮಶಾನಕಾಳಿಯನೆಂದು ತನ್ನೊಳಗೆ
ತಾಂ ನೊಂದು, ಮುರಿದು ತಿರುಗಿದನಸುರನರಮನೆಗೆ"[೧]

ಲಂಕೆಯಲ್ಲಿ ನಡೆದ ಮೃತ್ಯುವಿಪ್ಲವದಿಂದ ಕ್ಷುಭಿತಗೊಂಡ ರಾವಣನ ಮನದಲ್ಲಿ ಸೀತೆಯ ಬಗ್ಗೆ ಮೂಡಿದ ಭಯಭಕ್ತಿಗಳ ಕಾರಣದಿಂದಾಗಿ ಈ ದೃಶ್ಯ ರಾವಣನಿಗೆ ಮಾತ್ರ ಕಾಣಿಸಿಕೊಳ್ಳುತ್ತದೆ.

ಸೀತೆಯ ಸನ್ನಿಧಾನದಲ್ಲೇ ಇರುವ ತ್ರಿಜಟೆ ಅಚ್ಚರಿಗೊಂಡು ಕೇಳುವ ಮಾತು ಸೀತೆಯು ಗಳಿಸಿದ ಮಹಿಮಾಶಕ್ತಿಯನ್ನು ಅತ್ಯಂತ ಸುಂದರವಾಗಿ ಅಭಿವ್ಯಕ್ತಿಸುತ್ತದೆ.

"ನೀನಾರ್, ಮಹಾತಾಯಿ? ಹೆದರುತಿದೆ
ಬಗೆ, ನಿನ್ನ ಸಾನಿಧ್ಯ ಭೀಷ್ಮ ಪ್ರಭಾವದಿಂ
ನೀನೆ ನೀಂ ಪೇಳ್ದ ಆದ್ಯಾಶಕ್ತಿ! ನಾಂ ಮೂರ್ಖೆ,
ಮಾತಾಯಿ, ನಿನಗಿದೊ ನಮಸ್ಕಾರ! ಸಾಸಿರ
ನಮಸ್ಕಾರ![೨]

ಎಲ್ಲರಂತೆಯೇ ಆಸೆ ಆಕಾಂಕ್ಷೆಗಳನ್ನು ಹೊಂದಿದ, ಸಿಟ್ಟು, ಸೆಡವು, ಹಾಸ್ಯ ಪ್ರೇಮ, ಪ್ರೀತಿ ಅನುಕಂಪಗಳನ್ನು ಪ್ರದರ್ಶಿಸುವ ಭೂಜಾತೆಗೆ ಇಂಥ ಅಪೂರ್ವ ಶಕ್ತಿ ದೊರೆತದ್ದು ಹೇಗೆ ಎಂಬುದನ್ನು ಆಕೆಯೇ ತಿಳಿಸುತ್ತಾಳೆ.

---

[೧] ಅದೆ, 'ಶ್ರೀರಾಮಾಯಣಚಿತ್ ತಪಸ್ ಶ್ರೀ' ಪುಟ ೭೫೩, ಸಾಲು ೧೬೨-೧೭೭.

[೨] ಅದೇ ಪುಟ ೭೫೩-೪೫೪, ಸಾಲು ೧೮೫-೧೮೯.

“ನಿನಗೊಂದನೊರೆದಪೆನೆನಗೊದಗಿದೊಂದು
ನವ್ಯ ಸಾಕ್ಷಾತ್ಕಾರಮಂ. ಆವುದಾಗಲಿ ನೆಪಂ
ಫಲದಾಯಕಂ ತಪಂ, ನನಗೆ, ರಘುನಾಥಂಗೆ
ಮೇಣ್ ರಾಕ್ಷಸೇಂದ್ರಂಗೆ ಮೂವರ್ಗಮವರವರ
ಕರ್ಮಾನುಸಾರಿ ಜನ್ಮೋದ್ದೇಶ ಸಾಧನೆಗೆ
ಮೇಣಾತ್ಮ ವಿಕಸನದ ಪರಿಣಾಮಸಿದ್ಧಿಗೆ
ಸಹಾಯಮಾದುದು ಮಂಥರೆಯ ಮೂಲದೀ ಬೃಹದ್
ದುರ್ಘಟನೆ”
“ನಾನಿಂದು
ಅಂದಿನಳಲ್ಲ, ರಾಮಧ್ಯಾನಮಹಿಮೆಯ
ನಿರಂತರ ತಪಸ್ಯೆಯಿಂ ನನಗಲೌಕಿಕ ಸಿದ್ಧಿ
ತನಗೆ ತಾನಾಯ್ತು” ರಾಮನನರಿತೆ ನಾತ್ಮದಿಂ
ತನ್ನ ನಿತ್ಯ ವಿಭೂತಿಯಂ ಪರಬ್ರಹ್ಮನೆಯೆ
ತಾನ್”[೧]

ಪತಿಯಲ್ಲೆ ಪರಬ್ರಹ್ಮನನ್ನು ದರ್ಶಿಸುವ ಶಿಖರದೆತ್ತರಕ್ಕೇರಿದ ಸೀತೆ ಆತನ ಲೋಕಲೀಲಾ ಕ್ರಿಯೆಯಲ್ಲಿ ತನ್ನ ಆತ್ಮಶಕ್ತಿಯಿಂದ ಅದೃಶ್ಯಭಾಗಿಯಾಗಿ ಅವನ ಸರ್ವೋದ್ಯಮಕ್ಕೂ ಜೀವಶಕ್ತಿಯಾಗುತ್ತಾಳೆ. ರಾವಣನ ಮಹಾವಿಕ್ರಮದೆದುರು ವಾನರ ಸೇನೆ ಪತಂಗಗಳಂತೆ ಉದುರುತ್ತಿರುವಾಗ ಸೀತೆ ತ್ರಿಜಟೆಗೆ ಹೇಳುವ ಮಾತು ಅತ್ಯಂತ ಮಹತ್ವಪೂರ್ಣವಾದುದು.

“ಪ್ಲವಗಪತಿಗಳ ಪತಂಗೋಪಮಂ ಆ
ರಾವಣಾಗ್ನಿಗೆ ಸುಗ್ಗಿ ಬೀಳುತಿರ್ಪರು ಸಮರ
ದೇವತೆಗೆ ತಮ್ಮಸುಗಲಂ, ಪೂಜೆ ತಾಂಶಕ್ತಿ
ನಾಥಂಗೆ ನೆರಮಪ್ಪೆನಾತನಮ ಪೂಜಿಸಿ
ನಿವೇದಿಸುವೆನಾತ್ಮಬಲಮಮ!”[೨]

ಸೀತೆಗೆ ಬಂದ ಬಲವೆಲ್ಲ ರಾಮಧ್ಯಾನದಿಂದ ಬಂದದ್ದು; ರಾಮನ ಸರ್ವೋದ್ಧಾರ ಕ್ರಿಯೆಗೆ ನೆರವಾದ ಬಲವೆಲ್ಲ ಸೀತಾ ತಪಸ್ಸಿನಿಂದ ಬಂದದ್ದು. ಹೀಗೆ ರಾಮಸೀತೆಯರಿಬ್ಬರೂ ಪರಸ್ಪರರ ವಿರಹಧ್ಯಾನದಿಂದ ಆತ್ಮಶಕ್ತಿಯನ್ನು ವರ್ಧಿಸಿಕೊಂಡು ಅಪೂರ್ವವಾದ ಅಲೌಕಿಕ ಶಕ್ತಿಸಾಮರ್ಥ್ಯಗಳನ್ನು ಗಳಿಸಿಕೊಂಡು ದೇವಮಾನವರಾಗುವ ಮತ್ತು ಸುತ್ತಣ ಪರಿಸರವನ್ನು ತಮ್ಮೆತ್ತರಕ್ಕೇರಿಸುವ ಈ ಜೀವನದರ್ಶನ ಜಗತ್ ಕಾವ್ಯಲೋಕದಲ್ಲೇ ಅತ್ಯಂತ

---

೧ ಅದೇ, ಪುಟ ೬೫೪–೬೫೫, ಸಾಲು ೧೯೫–೨೦೦, ೨೧೧–೨೧೬.

೨ ಅದೇ, ಪುಟ ೬೫೫, ಸಾಲು ೨೨೮–೩೨.

ಅಸಾಧಾರಣವಾದದ್ದು. ಈ ವ್ಯಕ್ತಿತ್ವದ ಅನಂತ ಸತ್ವ ಸ್ವರೂಪವನ್ನು ಅದರ ಪರಮಸ್ಥಿತಿಯಲ್ಲಿ ದರ್ಶಿಸಿದ ರಾವಣನೇ ಇದಕ್ಕೆ ಜ್ವಲಂತಸಾಕ್ಷಿ.

ರಾಮ ಪ್ರಾಣವನ್ನು ಬಾಣರೂಪದಲ್ಲಿ ಬಂಧಿಸಿ ತಂದಿದ್ದ ಲಂಕೇಶ್ವರ ಆಡುವ ಕೊನೆಯ ಮಾತುಗಳು,

“ನೋಡಿಲ್ಲಿ! ಭದ್ರಮುಷ್ಟಿಯೊಳೆಂತು ಪಿಡಿದಿಹೆನ್
ಭುವನೈಕವೀರನಂ! ಕೊಳ್ಳಿದಂ ಕಪ್ಪಮಂ
ಕಾಣ್ಕೆಕೊಡು ಮಾತೆ ಸೀತೆಗೆ ನಿನಗೆ ಸೋಲ್ತವಂ
ನಿನಗೆ ತಾನೆಯ ಸೋಲ್ತು, ನೀಂ ಸೊಲ್ತಾತನಂ
ಗೊಲ್ದೊಪ್ಪಿಸಿಹನದಕೆ ತಪ್ಪುಂ ಕ್ಷಮಿಪುದೆಂದು!”[೧]

ಎಲೆಮನೆಯಲ್ಲಿ ರಾಮನ ಬರುವಿಕೆಯನ್ನು ಎದುರುನೋಡುತ್ತಿದ್ದ ಸೀತೆಗೆ ಕ್ಷಣ ಕ್ಷಣವು ಯುಗವಾಗಿ ಉರುಳುತ್ತದೆ. ರಾಮನ ಸಂದೇಶವನ್ನು ಹೊತ್ತು ತಂದ ಹನುಮಂತನ ಮಾತಿನಂತೆ ಜಾನಕೀರಾಮನ ದರ್ಶನಕ್ಕೆ ತಾನೇ ಸಿದ್ಧಳಾಗಿ ಮಿಂದು, ಅಲಂಕಾರ ಭೂಷಿತೆಯಾಗಿ ಬರುತ್ತಾಳೆ. ಪತಿಯ ಕಾಣುವ ಕಾತುರತೆಯಿಂದ ಬಂದ ಭೂಜಾತೆಗೆ ರಾಮನ ನಿರ್ಲಕ್ಷವನ್ನು ಕಂಡು ಬೆರಗಾಗುತ್ತಾಳೆ, ಮಮ್ಮಲ ಮರಗುತ್ತಾಳೆ ಆತನ ಪುರುಷನುಡಿಗಳಿಗೆ ತತ್ತರಿಸಿ ಹೋಗುವ ಸೀತೆ ಕೊನೆಗೆ ಅಗ್ನಿಯನ್ನು ಸಿದ್ಧಗೊಳಿಸುವಂತೆ ಲಕ್ಷ್ಮಣನಿಗೆ ತಿಳಿಸಿ ಅಗ್ನಿ ಪ್ರವೇಶಕ್ಕೆ ಸಿದ್ಧಳಾಗುತ್ತಾಳೆ. ರಾಮನ ಈ ಅನಿರೀಕ್ಷಿತ ವರ್ತನೆಯಿಂದ ಇಡೀ ಸಮೂಹವೇ ಬೆಕ್ಕಸ ಬೆರಗಾಗುತ್ತದೆ. ಸೀತೆ ಕೊಂಚವು ಅಳುಕದೆ, ಕುಗ್ಗದೆ ರಾಮನ ಪಾದಗಳಿಗೆ ನಮಸ್ಕರಿಸಿ ಅಗ್ನಿ ಸನ್ನಿಧಿಗೆ ನಡೆಯುತ್ತಾಳೆ.

“ಓ ಅಗ್ನಿ,
ನೀಂ ಲೋಕಸಾಕ್ಷಿ, ನಡೆನುಡಿಗಳಲ್ಲಿ ಬಗೆಯಲ್ಲಿ
ರಾಘವೇಂದ್ರನನುಳಿದು ಚರಿಸಿರ್ದೊಡೆನ್ನು ಸಿರ್
ನನ್ನನಾಹುತಿಗೊಳ್ ಆದಿತ್ಯನುಂ ಚಂದ್ರನುಂ
ಸಂಧ್ಯೆಯುಂ ರಾತ್ರಿಯುಂ ಪೃಥಿವಿಯುಂ ಸಾಕ್ಷಿಯಿರೆ,
ಪುರುಷಪುಂಗವನೆನ್ನ ಪತಿಪಾದಪದ್ಮದೊಳ್
ನಿಚ್ಚಮುಂ ನೆಲಸಿರ್ಪನಾದೊಡಾಂ ಕಾಯ್ದುಕೊಳ್,
ಕಾಯ್ದುಕೊಳ್, ಕಾಯ್ದುಕೊಳ್, ಓ ಅನಿಲಸಖಿ, ನಿನ್ನ
ಈ ಮಗಳನವಳ ಪತಿ ಚರಣ ಸೇವಾರ್ಥಮೆನ್ನಂ”[೨]

---

೧ ಅದೇ, ‘ದೈತ್ಯನೇರ್ದನ್ ಚೈತ್ಯಮಂಚಮಂ’ ಪುಟ ೮೧೦, ಸಾಲು ೩೬–೪೦.
೨ ಅದೇ, ‘ರಯ್‌ಗೆ ಕರೆದೊಯ್, ಓ ಅಗ್ನಿ!’ ಪುಟ ೮೪೩, ಸಾಲು ೪೯೯–೫೦೬.

ಸೀತೆ ಅಗ್ನಿ ಪ್ರವೇಶ ಮಾಡಿದೊಡನೆಯೆ ರಾಮನು ಅವಳನ್ನು ಹಿಂಬಾಲಿಸುತ್ತಾನೆ. ಧವಳ ಚಾರಿತ್ರ್ಯದ ಸೀತೆಯನ್ನು ಪಡೆದುಕೊಳ್ಳಲು ರಾಮ ಅಗ್ನಿ ಪ್ರವೇಶ ಮಾಡುವ ಈ ಸನ್ನಿವೇಶ ನಿಜಕ್ಕೂ ರೋಚಕವಾಗಿ ಮೂಡಿಬಂದಿದೆ. ಪತಿವ್ರತಮೂರ್ತಿಯನ್ನು ಅಗ್ನಿಪ್ರವೇಶ ಮಾಡುವಂತೆ ಹೇಳಿದ ಪುರುಷನ ಪರೀಕ್ಷೆಯು ಇಲ್ಲಿ ನಡೆಯುತ್ತದೆ. ಅಗ್ನಿಯಿಂದ ಸೀತಾರಾಮರು ಬಂದಾಗ ಅನಲೆ ಸಹ ಇದನ್ನೆ ಹೇಳುತ್ತಾಳೆ. ಸೀತೆಯನ್ನು ಪರೀಕ್ಷಿಸುವ ನೆಪದಿಂದ ತನ್ನನ್ನು ತಾನೇ ಪರೀಕ್ಷೆಗೆ ಗುರಿಮಾಡಿಕೊಳ್ಳುತ್ತಾನೆ. ತನ್ನನ್ನು ತಿರಸ್ಕರಿಸಿದ ರಾಮನೇ ಅಗ್ನಿಲೋಕಕ್ಕೆ ಬಂದು ಗೌರವಪೂರ್ವಕವಾಗಿ ಮರಳಿ ಭೂಲೋಕಕ್ಕೆ ತನ್ನನ್ನು ಕರೆದೊಯ್ಯುವಂತೆ ಮಾಡಿ ತನ್ನ ಸ್ವಾಭಿಮಾನ ಸೌಶೀಲ್ಯಗಳನ್ನು ಜಗತ್ತಿಗೆ ತಿಳಿಸುತ್ತಾಳೆ. ಇಡೀ ರಾಮಾಯಣದರ್ಶನದ ಉದ್ದಕ್ಕೂ ತಾನೂ ಬೆಳೆಯುತ್ತಾ ತನ್ನ ಸುತ್ತಮುತ್ತಲಿನವರನ್ನು ಬೆಳೆಸುತ್ತ, ಪರಿವರ್ತಿಸುತ್ತಾ ಸಾಗುತ್ತಾಳೆ.



# ಅಧ್ಯಾಯ ೪

## ಶ್ರೀರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಕಂಡ ಬದಲಾವಣೆಯ ಮಹತ್ವ

ಆರಂಭದಲ್ಲಿ ಕವಿ ಹೇಳಿದಂತೆ 'ವಾಲ್ಮೀಕಿಯುಲಿದ ಕಥೆಯಾದರೂ 'ಬೇರೆ ಮೈಯಾಂತಂತೆ' ಕಾವ್ಯ ಕಟ್ಟಿರುವುದಂತು ನಿಜ. ಕಾವ್ಯ ಹೆಜ್ಜೆ ಹೆಜ್ಜೆಗೂ ಇದನ್ನು ಸಾಬೀತುಪಡಿಸುತ್ತದೆ. 'ಪಾಪಿಗುದ್ಧಾರಮಿಹುದ್ ಸೃಷ್ಟಿಯ ಮಹದ್ವ್ಯೂಹ ರಚನೆಯೊಳ್ ಎಂದು ಹೇಳಿದ ಕವಿ ಮಂಥರೆ, ಕೈಗೆ, ಮಂಡೋದರಿ, ಊರ್ಮಿಳೆ ಮೊದಲಾದ ಪಾತ್ರಗಳಿಗೆ ನ್ಯಾಯ ದೊರಕಿಸಿಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಅಂತೆಯೇ ಮೂಲದಲ್ಲಿಯೇ ಪರಮಪೂಜ್ಯಳಾಗಿ ಉಜ್ವಲವಾಗಿ ಬೆಳಗಿದ ಸೀತೆ ಕುವೆಂಪು ಕೈಯಲ್ಲಿ ಮತ್ತೂ ಉಜ್ವಲವಾಗಿ ಬೆಳಗಿದ್ದಾಳೆ. ಅಲ್ಲಲ್ಲಿಯೆ ಎಡೆಯರಿತು ಕುವೆಂಪು ಮಾರ್ಪಡಿಸಿಕೊಂಡಿದ್ದಾರೆ.

ಸೀತೆಯ ಜನನ ಎರಡೂ ಕಾವ್ಯಗಳಲ್ಲಿ ಸೂಚ್ಯವಾಗಿಯೇ ಬಂದಿದೆ. ಆದರೆ ಅವರು ನವದಾಂಪತ್ಯದ ಸವಿಯನ್ನು ಅನುಭವಿಸಿದ್ದರ ಬಗ್ಗೆ ಕುವೆಂಪು ಸೊಗಸಾಗಿ ಕಟ್ಟಿಕೊಡುತ್ತಾರೆ.

ತಿಂಗಳ್ಗೆ ತೇನೆಒಲಿವಂತೆ ಸೀತಾಕಾಂತೆ
ತೇಲಾಡಿದಳು ತನ್ನ ರವಣನಾನಂದಕ್ಕೆ
ತನ್ನೆಲ್ಲಮಂ ನಲಿದು ನೈವೇದ್ಯಮಂ ನೀಡಿ
ತನ್ನತನವನೆ ಸೊನ್ನೆ ಮಾಡಿ ತಾನೊಲಿದಂತೆ
ಪ್ರಾಣೇಶ್ವರಂಗಿಷ್ಟಮೂರ್ತಿಗಾರ್ಶ
ಪ್ರಾಣಾರ್ಪಣಂ ಗೈವ ಸೊಗದಿಂ ಮಿಗಿಲ್ ಸೊಗಂ
ತಾನೊಳದೆ? ಪೋ! ಸಗ್ಗಕೇಂ ಕೋಡುಂಟೆ ಬೇರೆ?
ಶ್ರೀರಾಮ ಪ್ರೇಮದೊಳೆ ಕಂಡಳ ಜನಕ ಜಾತೆ
ಜೀವನದ ಪರಮಪುರುಷಾರ್ಥಮಂ ಮೇಣಖಿಳ
ಸೃಷ್ಟಿಲೀಲಾ ಮಹೋದ್ದೇಶಮಂ[1]

ಸೀತಾರಾಮರ ತುಂಬು ಪ್ರೀತಿಯ ಉತ್ತುಂಗ ಶಿಖರವನ್ನು ತಿಳಿಸುವಲ್ಲಿ ಈ ಮಾತುಗಳು ಸಮರ್ಥವಾಗುತ್ತವೆ. ಮುಂದೆ ವನವಾಸ, ಪ್ರಾಪ್ತಿಯಾದಾಗ ಗಂಡನೊಡನೆ ಅರಣ್ಯವಾಸಕ್ಕೆ 'ಪತಿವ್ರತಾಧರ್ಮಮಂ ಕೈಗೊಂಡು ನಿಯಮ ವಜ್ರದೊಳಂದ್ರಿಯಂಗಳಂ ಬಿಗಿದು ದೃಢಮನದಿ ಸೇವಿಪಿ ನಿನ್ನನೆ' ಎಂದು ಹೊರಡುತ್ತಾಳೆ. ೧೪ ವರ್ಷಗಳ ಕಾಲ ಸೀತಾರಾಮರು ಕಾಮವಿರಹಿತವಾದ ಸಂಯಮ ದಾಂಪತ್ಯ ಪ್ರೇಮವನ್ನು ಆಚರಿಸುತ್ತಾಳೆ. ಇದರಿಂದಾಗಿ ಒಬ್ಬರನೊಬ್ಬರ ಆತ್ಮದ ಆಳವನ್ನು ಪರಿಪೂರ್ಣವಾಗಿ ಅರಿಯಲು ಹಾಗೆಯೇ ಆ ಸಾಧನೆಯಿಂದ

---

[1] ಶ್ರೀರಾಮಾಯಣದರ್ಶನಂ 'ಮಮತೆಯ ಸುಳಿ ಮಂಥರೆ' ಪುಟ ೫೬, ಸಾಲು ೯–೧೪

ತಮ್ಮ ವ್ಯಕ್ತಿತ್ವವನ್ನು ಅಪೂರ್ವ ಎತ್ತರಕ್ಕೆ ಏರಿಸಿಕೊಂಡು ಲೋಕಾದರ್ಶರಾಗಲು ಸಹಾಯಕವಾಗುತ್ತದೆ. ವಾಲ್ಮೀಕಿಯಲ್ಲಿ ಈ ಸೂಚನೆಯಿಲ್ಲ. ಆದರೆ ವಾಲ್ಮೀಕಿಯ ಸೀತೆಯೂ ಸಹ ಹಿಂದುಮುಂದು ನೋಡದೆ ಪತಿಯನ್ನು ಹಿಂಬಾಲಿಸುತ್ತಾಳೆ.

ವನವಾಸದ ಸಂದರ್ಭದಲ್ಲಿ ಇವರಿಗೆ ಎದುರಾಗುವ ವಿರಾದನ ಪ್ರಸಂಗವು ಬದಲಾವಣೆಯ ದೃಷ್ಟಿಯಿಂದ ಮುಖ್ಯವಾಗುತ್ತದೆ. ವಾಲ್ಮೀಕಿಯಲ್ಲಿ ವಿರಾದ ಸೀತೆಯನ್ನು ಮುಟ್ಟಿದಾಗ, ಅವಳನ್ನು ಎತ್ತಿಕೊಂಡು ಹೋಗುವಾಗ ರಾಮ ಬಹುವಾಗಿ ನೊಂದುಕೊಳ್ಳುತ್ತಾನೆ. 'ತಂದೆಯ ಮರಣಕ್ಕಿಂತಲೂ ನನ್ನ ರಾಜ್ಯವನ್ನುಅಪಹರಿಸಿದಕ್ಕಿಂತಲೂ ಸೀತೆಯನ್ನು ಅನ್ಯನೊಬ್ಬನು ಮುಟ್ಟಿದ್ದರಿಂದ ಆಗಿರುವ ದುಃಖವು ಹೆಚ್ಚಾಗಿದೆ'[೧] ಎಂದು ಮಮ್ಮಲ ಮರುಗುತ್ತಾನೆ. ಕುವೆಂಪು ದರ್ಶನದಲಿ ಅನ್ಯಪುರುಷ ಮುಟ್ಟಿದ ಎಂದು ನೊಂದುಕೊಳ್ಳುವುದಕ್ಕೆ ಬದಲಾಗಿ ರೋಷ ತಾಳುತ್ತಾನೆ, ಲಕ್ಷ್ಮಣ 'ಅಗ್ರಜನೆ, ದೀರ್ಘದರ್ಶಿನಿ ದಿಟಂ ಆ ಕೈಕೆ' ಎಂದು ಆರ್ಭಟಿಸಿ ಮೊದಲು ಬಾಣ ಪ್ರಯೋಗಿಸುತ್ತಾನೆ. ಇಲಿ ಅಪವಿತ್ರತೆ ಕಲ್ಪನೆಯೇ ಸುಳಿಯುವುದಿಲ್ಲ. ಅದಕ್ಕಾಗಿಯೇ ಇಲ್ಲಿಯ ರಾಮ ಮುಂದೆ ಅನ್ಯಪುರುಷನ ಬಳಿಯಿದ್ದ ಸೀತೆಯನ್ನು ಪರೀಕ್ಷೆಗೆ ಗುರಿ ಮಾಡುತ್ತಲೇ ತನ್ನನ್ನು ಪರೀಕ್ಷೆಗೆ ಒಡ್ಡಿಕೊಳ್ಳುತ್ತಾನೆ. ಕಾವ್ಯದ ಕೊನೆಯಲ್ಲಿ ತಳೆದ ನಿಲುವು ಇಲ್ಲಿಯೇ ಸುಳಿದು ಮರೆಯಾಗುತ್ತದೆ.

ಇನ್ನೂ ಮಾಯಾಮೃಗದ ಸಂದರ್ಭದಲ್ಲಿ ಮೃಗವನ್ನು ಹಿಂಬಾಲಿಸಿಕೊಂಡು ಹೋದ ರಾಮನಿಗೆ ಆಪತ್ತು ಸಂಭವಿಸಿರಬಹುದು ಅವನಿಗೆ ನೆರವಾಗುವಂತೆ ಲಕ್ಷ್ಮಣನಲ್ಲಿ ಪರಿಪರಿಯಾಗಿ ಬೇಡುತ್ತಾಳೆ. ಎಷ್ಟೇ ಬೇಡಿದರೂ ಲಕ್ಷ್ಮಣ ಜಗ್ಗದೆ ಇರುವುದನ್ನು ಕಂಡು ಸೀತೆ ರೋಷ ತಾಳುತ್ತಾಳೆ. ವಾಲ್ಮೀಕಿಯ ಸೀತೆ ಬಹುಬೇಗ ತನ್ನ ಸಂಯಮವನ್ನು ಕಳೆದುಕೊಳ್ಳುತ್ತಾಳೆ. ಒಬ್ಬ ಸಾಮಾನ್ಯ ಸ್ತ್ರೀಯಂತೆ ಅತ್ಯಂತ ವಾಚ್ಯವಾಗಿ ಆಡಬಾರದ ಮಾತುಗಳನ್ನುಆಡುತ್ತಾಳೆ. ೧೬ ಶ್ಲೋಕಗಳಷ್ಟು ಸುದೀರ್ಘವಾಗಿ ಇವಳ ಬೈಗುಳದ ಮಹಾಪೂರ ಹರಿದಿದೆ. ಕುವೆಂಪು ಸೀತೆಯಲ್ಲಿ ಸಾತ್ವಿಕ ರೋಷ ಕಾಣುತ್ತದೆ. ಎಷ್ಟು ಕೇಳಿದರೂ ಕಲ್ಲು ಬಂಡೆಯಂತೆ ನಿಂತಿದ್ದ ಲಕ್ಷ್ಮಣನ ಮೇಲಿದ್ದ ಪುತ್ರಪ್ರೇಮ ಕದಡುತ್ತದೆ. ಅವಳ ಬಾಯಿಂದ ಪರುಷ ವಾಕ್ಯಗಳು ಮೂಡಿಬಂದರೂ ಅವು ಅತ್ಯಂತ ಸೂಚ್ಯವಾಗಿ ಬರುತ್ತವೆ.

ಎಳೆಯ ಮುಳ ಚುಚ್ಚಲ್ಕೆ ನೋವಲ್ತದುವೆ ಮೆಚ್ಚು
ಬೆಳೆದರಾಮುಳ್, ಅದರ ಕಚ್ಚು ಮುತ್ತಹುದೆ ಪೇಳ್?
ಎಳೆಯ ಕರು ಬೆಳೆದ ಮೇಲದರ ತಾಯನೆ ಬೆದಗಿ
ಬಯಸಿದ ಪುದಯ್ಯೊ![೨]

ಇಂಥ ಪರಿಸ್ಥಿತಿಯಲ್ಲಿ ಇಷ್ಟಾದರೂ ಕಠಿಣತೆ ಇರಬೇಕಾಗುತ್ತದೆ. ಇದು ಸಹಜ ಕೂಡ ಇಲ್ಲಿ ಭಾಷೆಯನ್ನು ಅಷ್ಟೆ ಸಮರ್ಥವಾಗಿ ಕುವೆಂಪು ದುಡಿಕೊಂಡಿದ್ದಾರೆ.

---

೧ ಅರಣ್ಯಕಾಂಡ, ಸರ್ಗ ೨

೨ ಅದೇ, ಓ ಲಕ್ಷ್ಮಣಾ! ಪುಟ ೨೪೫, ಸಾಲು ೩೬೫-೬೯.

ರಾಮಲಕ್ಷ್ಮಣರು ಕಣ್ಮರೆಯಾದ ತಕ್ಷಣವೇ ಸೀತೆಯ ಅಪಹರಣಕ್ಕೆ ಸಜ್ಜಾಗಿ ಬರುವ ರಾವಣನೊಡನೆಯ ಸೀತಾ ಸಂವಾದವು ಸಹ ಕುವೆಂಪು ಕೈಯಲ್ಲಿ ತನ್ನ ವಿಶಿಷ್ಟತೆಯನ್ನು ಮೆರೆದಿದೆ. ವಾಲ್ಮೀಕಿಯ ಸೀತೆ ಋಷಿವೇಷದ ರಾವಣನನ್ನು ಕಂಡು ನಿಜವಾದ ಋಷಿಯೆಂದೆ ಭಾವಿಸಿ ತನ್ನೆಲ್ಲ ವೃತ್ತಾಂತವನ್ನು ಅರಹುತ್ತಾಳೆ. ಆದರೆ ಇಲ್ಲಿ ಸೀತೆ ಮಹಾಚತುರೆ ಅವನ ಹಾವಭಾವ, ಮಾತಿನ ವೈಖರಿಯನ್ನು ಗಮನಿಸಿಯೇ ಅವನು ಮಾಯಾವಿ ಎಂದು ತಿಳಿದು ಗಂಡ, ಮೈದುನರು ಬರುವವರೆಗೂ ಈತನನ್ನು ತಡೆದು ನಿಲ್ಲಿಸಬೇಕೆಂದು ಮಾತಿನ ಬಲೆಯನ್ನು ಬೀಸುತ್ತಾಳೆ. ತನ್ನೆಲ್ಲಾ ವೃತ್ತಾಂತವನ್ನು ತಿಳಿಸುತ್ತಾಳೆ. ಈ ಪ್ರಸಂಗವನ್ನು ಮುಂದಿನ ಅಧ್ಯಾಯದಲ್ಲಿ ದೀರ್ಘವಾಗಿ ಚರ್ಚೆ ಮಾಡಲಾಗಿದೆ.

ರಾವಣ ಸೀತೆಯನ್ನು ಲಂಕೆಗೆ ಕರೆದುಕೊಂಡು ಹೋಗುತ್ತಾನೆ. ಲಂಕೆಗೆ ಸೀತೆ ಪ್ರವೇಶಿಸಿದ ಬಳಿಕ ಲಂಕೆಯಲ್ಲಾದ ಬದಲಾವಣೆಯಲ್ಲಿ ಕುವೆಂಪು ತಮ್ಮದೆ ಆದ ದಾರ್ಶನಿಕ ನಿಲುವನ್ನು ಮೆರೆದಿದ್ದಾರೆ. ಭೂಜಾತೆಯ ಸ್ಪರ್ಶದಿಂದ ಲಂಕೆಯ ಮಣ್ಣು ಪಾವಿತ್ರ್ಯವನ್ನು ಪಡೆದುಕೊಳ್ಳುತ್ತದೆ.

ವೈರಭಾವದೀಪ್ತಳಾಧ ವಾಲ್ಮೀಕಿಯ ಸೀತೆಗೂ ಮಾತೃಭಾವದೀಪ್ತಳಾದ ಈ ಸೀತೆಗೂ ಎಷ್ಟು ಅಂತರ! ಈ ಸೀತೆಯ ಮನೋಭಾವ ರಾವಣನ ಪರಾಭವದ ಕಡೆಗಿಲ್ಲ, ಅವನ ಆತ್ಮೋದ್ಧಾರದ ಕಡೆಗಿದೆ. ಅವನ ಪಾಪ ಬುದ್ಧಿಯನ್ನು ತಿದ್ದಿ, ಪುಣ್ಯಮುಖಿಯನ್ನಾಗಿ ಮಾಡೇಕೆಂಬ ಘನೋದ್ದೇಶ, ಪರಮಪಾವನೋದ್ದೇಶ ಇಲಿ ಒಡಮೂಡಿ ತೋರುತ್ತದೆ. ರಾವಣನನ್ನು ಸಂಹಾರ ಮಾಡಿ ಅವನನ್ನು ಇಲ್ಲದಂತೆ ಮಾಡುವುದು ಸುಲಭದ ಕೆಲಸ, ಆದರೆ ಅದು ಮಹತ್ಕಾರ್ಯವಲ್ಲ. ಆದರೆ ರಾವಣತ್ವವನ್ನು ಕಳೆದು ಅವನಲ್ಲಿರುವ ರಾಮತ್ವವನ್ನು ಉದ್ದೀಪನಗೊಳಿಸುವ ಮಹತ್ವದ ಕಾರ್ಯವನ್ನು ಮಾಡಬೇಕಾಗಿದೆ. ಏಕೆಂದರೆ ರಾವಣ ಬಿದ್ದೊಡನೆ ರಾವಣತ್ವ ಹೋಗಲಿಲ್ಲ. ರಾವಣತ್ವವನ್ನು ಕಳೆಯುವ ತಪಶ್ಚರ್ಯೆಯಲ್ಲಿ ಆಕೆ ತೊಡಗುತ್ತಾಳೆ.[೧]

ವಾಲ್ಮೀಕಿ ರಾಮಾಯಣದಲ್ಲಿ ಉದ್ದಕ್ಕೂ ಮಹಾ ನೀಚನಾಗಿ ಪರಮ ವ್ಯಾಮೋಹಿಯಾಗಿಯೇ ಉಳಿದುಕೊಂಡು ಸೀತೆಯಂಥ ಉಜ್ವಲ ಜ್ಯೋತಿಯ ಬೆಳಕಿನಲ್ಲಿ ಕೊಂಚವೂ ಬದಲಾಗದ ದುಷ್ಟನಾದ ರಾವಣ ಇಲ್ಲಿ ಸೀತೆಯ ವ್ಯಕ್ತಿತ್ವ ಲೋಕೋತ್ತರವಾಗಲು ಪರೋಕ್ಷವಾಗಿ ನೆರವಾಗುತ್ತಾ ಅದೇ ಕಾಲದಲ್ಲಿ ಆ ಮಹಾಜ್ಯೋತಿಯಿಂದ ತನ್ನ ಅವಗುಣಗಳನ್ನು ಕರಗಿಸಿಕೊಳ್ಳುತ್ತಾ ಸುಗುಣಗಳನ್ನು ಉತ್ಕರ್ಷಿಸಿಕೊಳ್ಳುತ್ತಾ... ಅಂತಿಮವಾಗಿ ಶ್ರೀರಾಮ ಸಮನಾಗಿ ಶ್ರೀರಾವಣನಾಗಿ ಶ್ರೀರಾಮನೇ ಆಗಿ ಅವಿರ್ಭವಿಸುತ್ತಾನೆ. ಈ ರೀತಿಯ ಪರಿವರ್ತನೆಗೆ ಯಾರು ಕಾರಣರು ಎಂಬುದನ್ನು ತನ್ನ ಹೃದಯೇಶ್ವರಿ ಮಂಡೋದರಿಗೆ ಹೇಳುತ್ತಾನೆ.

'ದಿಟಂ
ದೇವಿ ನೀನೊರ್ವಳೆಯೆ ರಾವಣಗೆ! ಮೇಣ್ ಸೀತೆ!

---

[೧] ಕೋ.ಚೆನ್ನಬಸಪ್ಪ 'ಹದಿಬದೆಯರಧಿ ದೇವಿ ಸೀತಾದೇವಿ' ಗಂಗೋತ್ರಿ, ಪುಟ ೩೯-೪೦.

ಮನದಿ ಮೂಡದಿ ಮೈಥಿಲಿಯ ಚಿತ್ರಕಸುರಂ
ನಮಸ್ಕರಿಸಿ, ಮಂಡೋದರಿಯ ಮೆಯ್ಗೆ ಮುಳ್ಳೇಳೆ
ಪೇಳ್ವನಂತಸ್ಥಮಂ : ನಿನಗಿಂ ಮಿಗಿಲ್ ಸೀತೆ
ನನಗೆ ದೇವತೆ, ಮಾತೆ! ಶ್ರದ್ಧೆಗೆಟ್ಟಿರ್ದೆನಗೆ
ಶ್ರದ್ಧೆಯಂ ಮರುಕೊಳಿಸುತಾತ್ಮದುದ್ಧಾರಮಂ
ತಂದ ದೇವತೆ ಪುಣ್ಯಮಾತೆ!’[೧]

ಅಗ್ನಿಪ್ರವೇಶದ ಸಂದರ್ಭ ಕುವೆಂಪು ಕೈಯಲ್ಲಿ ಮಹತ್ವಪೂರ್ಣ ಬದಲಾವಣೆಯನ್ನು ಕಂಡಿದೆ. ವಾಲ್ಮೀಕಿಯಲ್ಲಿ ಒಂದು ವರ್ಷಗಳ ಕಾಲ ರಾಮನಿಂದ ದೂರಾಗಿ ರಾಕ್ಷಸರ ಮಧ್ಯೆ ಇದ್ದ ಸೀತೆ ರಾವಣನ ಮರಣದ ಅನಂತರ ರಾಮನನ್ನು ಸೇರುವ ತವಕದಲ್ಲಿದ್ದಾಳೆ. ಮಿಂದು ಅಲಂಕಾರ ಭೂಷಿತೆಯಾಗಿ ಬಂದು ರಾಮನ ಒಲವಿನ ಮಾತುಗಳನ್ನು ಕೇಳಲು ತವಕಿಸುತ್ತಿದ್ದ ಕಿವಿಗಳಿಗೆ ಕರ್ಕಶವಾದ ರಾಮನ ತಿರಸ್ಕಾರದ ನುಡಿ ಬೀಳುತ್ತದೆ. ‘ಉತ್ತಮ ಕಾಲದಲ್ಲಿ ಜನಿಸಿದ ತೇಜಸ್ವಿಯಾದ ಯಾವ ಪುರುಷನು ತಾನೆ ಚಿರಕಾಲದವರೆಗೆ ಪರಗೃಹದಲ್ಲಿರುವ ಸ್ತ್ರೀಯನ್ನು ಒಳ್ಳೆಯ ಅಭಿಪ್ರಾಯದಿಂದ ಹೃತ್ಪೂರ್ವಕವಾಗಿ ಸ್ವೀಕರಿಸಿಯಾನು? ಎಲ್ಲಿಯಾದರೂ ಹೋಗು ಯಾರನ್ನಾದರೂ ಜೀವನಕ್ಕಾಗಿ ಆಶ್ರಯಿಸು’ ಎಂಬ ರಾಮನ ಮಾತು ಕಾದಸೀಸವನ್ನು ಕಿವಿಗೆ ಸುರಿದಂತಾಗುತ್ತದೆ. ತಾನು ಇದುವರೆಗೂ ತನ್ನ ಆರಧ್ಯದೈವ ಎಂದು ನಂಬಿಕೊಂಡು ಬಂದಿದ್ದ ತನ್ನ ಪತಿಯೇ ತಿರಸ್ಕರಿಸಿದ ಮೇಲೆ ಸೀತೆ ಅಗ್ನಿಗೆ ಆಹುತಿಯಾಗಲು ನಿಶ್ಚಯಿಸುತ್ತಾಳೆ. ಲಕ್ಷ್ಮಣನಿಗೆ ಚಿತೆಯನ್ನು ಸಿದ್ಧಗೊಳಿಸುವಂತೆ ಹೇಳುತ್ತಾಳೆ. ಸೀತೆ ಲಕ್ಷ್ಮಣನಲ್ಲಿ ಹೆಚ್ಚು ಆತ್ಮೀಯತೆಯನ್ನು ಹೊಂದಿದ್ದಳು ಎಂಬುದನ್ನು ವಾಲ್ಮೀಕಿ ಮತ್ತು ಕುವೆಂಪು ಕಾವ್ಯಗಳೆರಡರಲ್ಲೂ ವ್ಯಕ್ತವಾಗುತ್ತದೆ. ರಾವಣ ಅಪಹರಿಸುವಾಗಲೂ ಸೀತೆ ಕರೆದದ್ದು ತನ್ನ ಪುತ್ರ ಸಮಾನನಾದ ಲಕ್ಷ್ಮಣನನ್ನೆ ಇಲ್ಲೂ ಸಹ ಲಕ್ಷ್ಮಣನಿಗೆ ಚಿತೆಯನ್ನು ಸಿದ್ಧಗೊಳಿಸುವಂತೆ ಹೇಳುತ್ತಾಳೆ. ಸೀತೆ ಕಡೆಗೆ ಚಿತೆಯನ್ನೇರಿ ತಾನೂ ಶುದ್ಧಳೆಂದು ಸಾಬೀತುಪಡಿಸುತ್ತಾಳೆ. ರಾಮ ಅವಳ ಪಾವಿತ್ರ್ಯತೆ ಜಗತ್ತಿಗೆ ತಿಳಿಯಲಿ ಮುಂದೆ ಲೋಕಪವಾದಕ್ಕೆ ಗುರಿಯಾಗದಿರಲಿ ಎಂದು ಪರೀಕ್ಷಿಸಿದ್ದಾಗಿ ಹೇಳಿ ಸ್ವೀಕರಿಸುತ್ತಾನೆ ಸುಖಾಂತ್ಯವಾಗಿಯೇ ಮುಕ್ತಾಯವಾದರೂ ಇದು ಕುವೆಂಪುವಿನ ಕೈಯಲ್ಲಿ ಬೇರೆಯೇ ಆಗಿ ಮೂಡಿ ಬಂದಿದೆ. ಇಲ್ಲಿಯೂ ಸಹ ಅದೇ ಪರುಷದ ಮಾತುಗಳ ಬಾಣವನ್ನು ಸೀತೆಯ ಮೇಲೆ ಪ್ರಯೋಗಿಸುತ್ತಾನೆ. ಆಕೆ ಅಗ್ನಿ ಪ್ರವೇಶಕ್ಕೆ ಸಿದ್ಧಳಾಗಿ ನಿಂತಾಗ ತನ್ನನ್ನು ಪರೀಕ್ಷೆಗೆ ಗುರಿಮಾಡಿಕೊಳ್ಳುತ್ತಾನೆ. ಇಬ್ಬರೂ ಪರಸ್ಪರ ದೂರವಿದ್ದರಿಂದ ಇಲ್ಲಿ ಗಂಡು-ಹೆಣ್ಣಿನ ಇಬ್ಬರ ಪರೀಕ್ಷೆಯೂ ನಡೆಯುತ್ತದೆ. ಅನಲೆ ಸಹ ಈ ಸಂದರ್ಭದಲ್ಲಿ ಇದನ್ನೇ ಹೇಳುತ್ತಾಳೆ. ಸಭೆಯ ಮಧ್ಯದಲ್ಲಿ ತನ್ನನ್ನು ತಿರಸ್ಕರಿಸಿದ ರಾಮನೇ ಅಗ್ನಿಲೋಕಕ್ಕೆ ಬಂದು ಗೌರವಪೂರ್ವಕವಾಗಿ ಮರಳಿ ಭೂಲೋಕಕ್ಕೆ ತನ್ನನ್ನು ಕರೆದೊಯ್ಯುವಂತೆ ಮಾಡಿ ತನ್ನ ಸ್ವಾಭಿಮಾನ ಕೌಶಲ್ಯಗಳನ್ನು ಜಗತ್ತಿಗೆ ತಿಳಿಸುತ್ತಾಳೆ. ವಾಲ್ಮೀಕಿಯಲ್ಲಿರುವಂತೆ ಅಗ್ನಿ ದಶರಥ, ಬ್ರಹ್ಮ ಮೊದಲಾದವರೆಲ್ಲ ಪ್ರತ್ಯಕ್ಷರಾಗಿ, ಸೀತೆಯ ಬಗ್ಗೆ ವಕಾಲತ್ತನ್ನು ವಹಿಸುವುದಿಲ್ಲ. ಸೀತೆಯ ಶುದ್ಧಚಾರಿತ್ರ್ಯ ತಾನು ಬೇಕಿದ್ದರೆ ತಾನಿದ್ದಲ್ಲಿಗೆ ಬಂದು ಕರೆದುಕೊಂಡು ಹೋಗು ಎಂಬ

[೧] ಅದೇ ‘ದಶಾನನ ಸ್ವಪ್ನಸಿದ್ಧಿ’ ಪುಟ ೧೧೫-೧೧೮, ಸಾಲು ೧೬೨-೧೬೯.

ಸ್ವಾಭಿಮಾನದ ಸಾತ್ವಿಕ ಸವಲತನ್ನು ಎಸೆಯುತ್ತದೆ. ಅದರಂತೆಯೇ ರಾಮನನ್ನು ತಾನಿದ್ದಲ್ಲಿಗೆ ಕರೆಸಿಕೊಂಡು ಅವನೊಡನೆಯೇ ಹಿಂದಿರುಗುತ್ತದೆ. ತನ್ನ ಅಪ್ರತಿಮ ತಪಸ್ಸಿನಿಂದ ಅಭೂತಪೂರ್ವವಾದ ದೈವಶಕ್ತಿಯನ್ನು ಧಾರಿಣ ಮಾಡಿದ ತನ್ನ ಅಸಾಧಾರಣ ಸತಿಮಣಿಯನ್ನು ಮರಳಿ ಪಡೆಯಲು ರಾಮನಂತಹ ಲೋಕೋತ್ತರಶೀಲನು ಅಗ್ನಿ ಪ್ರವೇಶ ಮಾಡಬೇಕಾಗುತ್ತದೆ. ಇದು ಸೀತೆಯ ಚಾರಿತ್ರಕ್ಕೆ ಅಷ್ಟೇ ಅಲ್ಲ ಆ ಮೂಲಕ ಸ್ತ್ರೀ ಸಮುದಾಯಕ್ಕೆ ಈ ಯುಗದ ಕವಿ ಸಲ್ಲಿಸಿದ ಅತ್ಯಾಪೂರ್ವ ಗೌರವ.



# ಅಧ್ಯಾಯ ೫

## 'ಸೀತಾಪಹರಣ' ಒಂದು ಅಧ್ಯಯನ

ಒಂದು ಮಹಾಕಾವ್ಯವು ತನ್ನ ಯಶಸ್ಸನ್ನು ಪಡೆಯಬೇಕಾದರೆ, ವಿಜೃಂಭಿಸಬೇಕಾದರೆ ಅದರಲ್ಲಿ ಮೇಳೈಸಿಕೊಂಡಿರುವ ಹಲವು ಘಟನೆಗಳಲ್ಲಿ ಕೆಲವಾದರೂ ವಿಹಿತವೂ, ವಿಲಸಿತವೂ ಆದವುಗಳಾಗಿದ್ದು ಕಾವ್ಯದ ಮಹೋನ್ನತಿಗೆ ಹೇತುವಾಗಿರುತ್ತವೆ. ಈ ಘಟನೆಗಳು ಆಕರ್ಷಣೀಯವಾಗಿದ್ದಷ್ಟೂ ಕಾವ್ಯದ ಸೊಗಸು ಹೆಚ್ಚುತ್ತದೆ. ರಾಮಾಯಣದ ಒಂದು ಚಾಲಕ ಶಕ್ತಿಯೇ ಜಾನಕಿ ಹಾಗೆಯೇ 'ಸೀತಾಪಹರಣ'ವೆ ಕಥೆಯ ಮುಂದಿನ ಹರಿಯುವಿಕೆಗೆ ಕಾರಣವಾಗುತ್ತದೆ. ಮಹಾಭಾರತದಲ್ಲಿ ದ್ರೌಪದಿಯ ಕೇಶಾಪಕರ್ಷಣ ಪ್ರೇರಣೆಯಾಗಿ ನಿಂತುಕೊಂಡರೆ ಇಲ್ಲಿ 'ಸೀತಾಪಹರಣ'. ಇಲ್ಲಿ ಪರಸ್ತ್ರೀ ಅಪಹರಣ ಅಲ್ಲಿ ಪರಸ್ತ್ರೀ ಅಪಮಾನ. ರಾಮಾಯಣದಲ್ಲಿ ಮಂಥರೆಯ ಕಾರಣದಿಂದಾಗಿ ಮುರಿದು ಬಿದ್ದ ಶ್ರೀರಾಮ ಪಟ್ಟಾಭಿಷೇಕ ಪ್ರಕರಣವು ಸೀತಾಪಹರಣದವರೆಗಿನ ಕಥಾ ಹಂದರಕ್ಕೆ ಕಾರಣವಾಗುತ್ತದೆ. ರಾಮಾಯಣದ ಈ ಎರಡು ಮುಖ್ಯ ಘಟನೆಗಳು ರಾಮಾಯಣ ಕಥೇಯ, ಸೀತಾವ್ಯಥೆಯ, ವಾನರ ಪರಾಕ್ರಮೋನ್ನತಿಯ, ರಾಮ ರಾವಣರ ಸತ್ಯ ಸಾಕ್ಷಾತ್ಕಾರ, ಮಹಾದರ್ಶನ ಸಿಂಧುವಿಗೆ ಕಾರಣ ಬಿಂದುಗಳಾಗುತ್ತವೆ. ಹಾಗಂದ ಮಾತ್ರಕ್ಕೆ ಕಾವ್ಯದ ಉಳಿದ ಘಟನೆಗಳು ಗೌಣ ಎಂದು ಭಾವಿಸುವುದು ಸರಿಯಲ್ಲ. ಪ್ರತಿಯೊಂದು ಘಟನೆಯು ತನ್ನದೆ ಆದ ಮಹತ್ವವನ್ನು ಪಡೆದುಕೊಳ್ಳುತ್ತದೆ.

ಆದಿಕವಿ ವಾಲ್ಮೀಕಿಯು ಈ ದೃಶ್ಯವನ್ನು ಮಹೋನ್ನತವಾಗಿ. ಚಿತ್ರಿಸಿದ್ದರೂ ಅದು ಮತ್ತೂ ಉಜ್ವಲಗೊಂಡಿರುವುದನ್ನು ಕುವೆಂಪು ಸೃಷ್ಟಿಯಲ್ಲಿ. ರಾಮ, ಲಕ್ಷ್ಮಣ, ಸೀತೆಯರು ಎಲೆಮನೆಯ ಪಂಚವಟಿಯಲ್ಲಿ ಹೇಮಂತ ಋತುವಿನ ಪ್ರಕೃತಿಯ ಶ್ರೀಮಂತ ಸಾನಿಧ್ಯದಲ್ಲಿದ್ದಾರೆ. ವನವಾಸವಧಿ ಕಳೆದು ಮನಸ್ಸು ಅಯೋಧ್ಯೆಯತ್ತ ಸೆಳೆಯುತ್ತಿರುವುದರಿಂದ ಊರಿನ ಹಿತಸ್ಮೃತಿಯ ಆನಂದದಲ್ಲಿ ತಲ್ಲೀನವಾಗಿದ್ದಾರೆ. ಆ ದಿನ ಅಯೋಧ್ಯೆಗೆ ಮರಳುವ ಸಂಭ್ರಮ ಎಲ್ಲರಲ್ಲೂ ಮಡುಗಟ್ಟಿದೆ. ಇದ್ದಕ್ಕಿದ್ದಂತೆಯೇ ಇವರ ಸಂತೋಷವನ್ನು ಕದಲುವ ರೀತಿ ಆಕಾಶದ ಯಾವೆಡೆಯೂ ಇಲ್ಲದ ಪಂಚವಟಿಯ ಮೇಲ್ಭಾಗದಲ್ಲಿ ಮಾತ್ರ ಸೂರ್ಯನನ್ನು ಮರೆಮಾಡಿ 'ದುಶ್ಯಕುನ ಸೂಚಕ ಬೃಹಚ್ಛಾಯೆ'ಯನ್ನು ಚೆಲ್ಲಿ ನಿಲ್ಲುತ್ತದೆ.

ನಿಂತುದಾ

ಜೀಮುತಛದ್ಮನೆಯನಾಂತ ರಾವಣರಥಂ
ನಿಶ್ಚಲಂ, ಕೆರೆಯ ಮೇಲ್ಗಡೆ ನಭದಿ ಹಾರಿಯಂ
ಮೀನಿಗೆರಗುವ ಮುನ್ನ ನಿಲ್ಲುವ ಕುರರಿಯಂತೆ!
ಮೇಘರೂಪಂಬೆತ್ತು ನಿಂದ ಪುಷ್ಪಕದ ಆ
ನೆಳಲೆ ಸೇತುವೆಯಾಗಿ, ಕಾಮಧೇನು ತನುವಾಗಿ

ರಾಮಸತಿಯಲರ್ಗೊಯ್ಯುತಿರ್ದ್ದಡವಿಗಳಿದನಾ
ಮಾರೀಚನುಪಮಾತೀತ ಕಾಮರೂಪಿ[೧]

ಸೀತಾಪಹರಣಕ್ಕಾಗಿ ಸನ್ನದ್ಧರಾಗಿ ಬಂದಿರುವ ಮಹಾಮಾಯಾವಿಗಳ ಕಪಟ ಪ್ರವೇಶ ಭಯಾನಕವೂ, ಅದ್ಭುತವೂ, ಯಥೋಚಿತವೂ ಆಗಿದೆ. ಮುಂದೆ ಅತ್ಯಂತ ರಮಣೀಯವೂ, ಜಗನ್ಮೋಹಕವೂ ಕನಕ ಕಾಂತಿಯುತವೂ 'ಕೋಟಿ ಕೋಟಿ ರುಕ್ಮ ಬಿಂದೂತ್ಕರ'ಗಳಿಂದ ಸಿಂಗರಿಸಲ್ಪಟ್ಟ ಚರ್ಮದಿಂದ ಕೂಡಿದ ಜಿಂಕೆಯು ಸೀತೆಯ ಮುಂದೆ ಸುಳಿಯುತ್ತದೆ. ಜಗನ್ಮಾತೆ ಸೀತೆಯನ್ನೇ ಮೋಹಿಸುವಂತೆ ಆಡಿದ ಆ ಜಿಂಕೆಯ ಹಾವಭಾವಗಳನ್ನು ಬೆಡಗು ಬಿನ್ನಾಣಗಳು ಅತ್ಯಂತ ಸೊಗಸುಗಾರಿಕೆಯಿಂದ ಕೂಡಿದ್ದವು.

. . . . ಕಿವಿಯ ಕುಣಿಸುತ್ತೆ, ಕಣ್ಮಲರ
ಮಿಂಚಿಸುತೆ, ಪೊಳೆವ ಕೊಳಗಿನ ಜಾನುಜಂಘೆಯಂ
ತೆಗೆತೆಗೆದಿಡುತೆ ನಲಿದು ನರ್ತಿಸುತೆ, ಕೊಂಕಿಸುತೆ
ಕೊರಳ ಬಿಂಕವನಕ್ಷಿಯಕ್ಷಿಣಿಯ ಬೇಟದಿಂ
ಬನಮೆಲ್ಲಮಂ ಗೋರಿಗೊಳ್ಳುತೆ ಕುರಂಗತನು
ಮಾರೀಚನಭಿಯಿಸಿದನು ತನ್ನ ಪಾತ್ರಮಂ:
ಸೂರೆಗೊಂಡನು ನೋಳ್ಪರಿರ್ವರಾ ನೇತ್ರಂಗಳಂ
ಲಂಕೇಶ್ವರನ ಮತ್ತೆ ಜಾನಕಿಯಾ, ವಾಸಂತ
ಕಾಂತಾರ ರಂಗಮಂ ಶೃಂಗಾರಗೈಯಲ್ಕೆ
ಬಂಗಾರದಂಗದಾ ಶೃಂಗಿ, ಕೋಳುಹೋದಳೆ,
ಹಾ, ದಶರಥನ ಸುತನ ತನ್ವಂಗಿ, ರಾವಣನ
ಬಾಳ್ದಿಟ್ಟಿ ಮೈಥಿಲಿಯ ಬೈತಲೆಯ ಬಟ್ಟೆಯೊಳ್
ಕಣ್ಗೆಟ್ಟವೋಲ್, ನೋಡಿ ನೋಡಿ![೨]

ಸೀತೆ ಮರುಳಾಗುವುದಕ್ಕೆ ಅಲೌಕಿಕ ಅಸಾಧಾರಣ ದೃಷ್ಟಿ ಕಾರಣವಾಗಿದ್ದರೂ ಸಹ ಪ್ರಕೃತಿಯಲ್ಲಿ ಲೌಕಿಕತೆಯ ಅಪಾಯಕ್ಕೆ ಅಂಜಿ, ಅನುಕಂಪೆ ತೋರಿ 'ಕೋಳು ಹೋದಳೆ, ಹಾ, ದಶರಥನ ಸುತನ ತನ್ವಂಗಿ' ಎಂದು ಮರುಗುತ್ತಾರೆ. ರಾವಣನ ಬಾಳಿನ ದೃಷ್ಟಿ ಮೈಥಿಲಿಯ ಬೈತಲೆಯ ಬಟ್ಟೆಯಲ್ಲಿ ಕಣ್ಣಿಟ್ಟ ಹಾಗೆ ಸೀತೆ ಜಿಂಕೆಯ ಸೌಂದರ್ಯಕ್ಕೆ ಮಾರು ಹೋಗುತ್ತಾಳೆ. ಇಲ್ಲಿ ಇಬ್ಬರೂ ಮರುಳಾಗುವರೆ! ಸೀತೆ ಹರಿಣಿಯ ಮೈಬಣ್ಣಕ್ಕೆ ಮರುಳಾಗಿ ಮಹಾಸಂಕಟಕ್ಕೆ ಒಳಗಾದರೆ, ರಾವಣ ಜಿಂಕೆಯಂತಹ ಸೀತಾ ಸೌಂದರ್ಯಕ್ಕೆ ಮರುಳಾಗಿ ಘೋರ ವಿಪತ್ತಿಗೆ ಗುರಿಯಾಗುತ್ತಾನೆ. ಎಲ್ಲಿ ತಡಮಾಡಿದರೆ ಆ ಜಿಂಕೆ ಓಡಿಹೋಗುವುದೋ ಎಂದು ರೋಮಾಂಚಿತಳಾಗಿ ಅಡವಿಯೆಲ್ಲ ಕಂಪಿಸುವಂತೆ ಮೈದುನನನ್ನು ಕೂಗಿ ಕರೆಯುತ್ತಾಳೆ. ಇಲ್ಲೆಲ್ಲ ಕವಿಯ ಪ್ರತಿಭಾ ಮಯೂರ ಗರಿಗೆದರಿ ನರ್ತಿಸಿರುವುದನ್ನು ಕಾಣಬಹುದು.

---

[೧] ಶ್ರೀರಾಮಾಯಣದರ್ಶನಂ, 'ಓಲಕ್ಷ್ಮಣಾ' ಪುಟ ೨೩೪,
[೨] ಅದೇ, ಪುಟ ೨೩೫–೨೩೬, ಸಾಲು ೯೪–೧೦೬.

‘ಓ ಲಕ್ಷ್ಮಣಾ,

ಓ ಬಾರಾ! ತಾರ ಬಿಲ್‌ಬಾಣಮಂ; ನೋಡ ಆ

ಏಣಮಂ! ಹಿಡಿಯ, ಬಾ! ಬಾ, ಬೇಗ ಓ ಲಕ್ಷ್ಮಣಾ!’’[೧]

ಸೀತೆಯ ಕೂಗಿಗೆ ಇಬ್ಬರೂ ಬೆದರಿ ಏನೋ ಒಂದು ದೊಡ್ಡ ಅನಾಹುತ ಸಂಭವಿಸಿರಬಹುದೆಂಬು ಭೀತಿಯಿಂದ ರಾಮಲಕ್ಷ್ಮಣರು ಬಿಲ್ಲು ಬಾಣಗಳನ್ನು ಹಿಡಿದು ಓಡೋಡಿ ಬರುತ್ತಾರೆ. ಇಲ್ಲಿ ವಾಸ್ತವವಾಗಿಯೂ ಸಹ ಆಗಿರುವುದು ದೊಡ್ಡ ಅನಾಹುತವೇ; ಸೀತೆ ಅದಕ್ಕಾಗಿಯೇ ರಾಮಲಕ್ಷ್ಮಣರನ್ನು ಆಹ್ವಾನಿಸುತ್ತಾಳೆ. ಕವಿ ಇದನ್ನೆಲ್ಲಾ ಸೂಚ್ಯವಾಗಿ ಧ್ವನಿಸುತ್ತಾ ಹೋಗುತ್ತಾನೆ. ರಾಮ ಲಕ್ಷ್ಮಣರನ್ನು ಮೊದಲು ಕಂಡಾಗ ರಾವಣನ ಮನಸ್ಸಿನಲ್ಲಿ ಉಂಟಾಗುವ ಭಾವನೆಗಳನ್ನು ಕವಿ ವಿಶಿಷ್ಟ ರೀತಿಯಲ್ಲಿ ವರ್ಣಿಸುತ್ತಾರೆ. ರಾಮ ಲಕ್ಷ್ಮಣರನ್ನು ಕಂಡು ರಾವಣ ಮೆಚ್ಚುತ್ತಾನೆ, ಬೆಚ್ಚುತ್ತಾನೆ, ಕಿಚ್ಚೆದ್ದು ತುಟಿಗಚ್ಚುತ್ತಾನೆ. ವೀರನಾದ ರಾವಣ ವೀರರಾದ ರಾಮಲಕ್ಷ್ಮಣರ ದೇಹದಾರ್ಢ್ಯತೆ, ಮಾರೀಚ ಹೇಳಿದ ರಾಮ ಪರಾಕ್ರಮದ ಔನ್ನತ್ಯ, ಪ್ರತ್ಯಕ್ಷವಾಗಿ ಆ ವ್ಯಕ್ತಿಯನ್ನೇ ನೋಡಿದಾಗಿ ಈ ಮೂರು ಮುಪ್ಪುರಿಗೊಂಡು ಬೆಚ್ಚಿಸಿರಬಹುದು. ಅಲ್ಲದೆ ಸೋದರಿಯ ಮಾನಭಂಗ, ಸೋದರರ ಪ್ರಾಣಭಂಗಗಳು ನೆನಪಿನಲ್ಲಿ ಮೂಡಿ ‘ಕಿಚ್ಚೆದ್ದು ತುಟಿಗಚ್ಚಿ’ದಂತೆ ಮಾಡಿರಬಹುದು. ಚಂದ್ರನಖಿ ವರ್ಣಿಸಿದ್ದು ಪ್ರತ್ಯಕ್ಷವಾಗಿ ಕಂಡಾಗ ದಿಟವಾಗಿ ತೋರುತ್ತದೆ.

ಜಿಂಕೆಯನ್ನು ಕಂಡ ಕೂಡಲೇ ಲಕ್ಷ್ಮಣನು ಇದು ಮಾಯಾಮೃಗ ಎಂದು ಗುರುತಿಸುತ್ತಾನೆ. ಅತ್ತಿಗೆ ತನಗೆ ಆ ಜಿಂಕೆಬೇಕೆಂದು ಆಸೆಪಟ್ಟಾಗ ಅದು ಮಾರೀಚ ಮಾಯೆಯೆಂದೂ ಅದರಿಂದಲೇ ನಿಜವಾದ ಮೃಗಗಳು ಈ ಕಪಟ ಜಿಂಕೆಯ ಬಳಿಗೆ ಬರಲು ಅಂಜಿ ಬೇರೆ ನಿಂತಿರುವುದಾಗಿ ಹೇಳುತ್ತಾನೆ. ಆದರೆ ಜಿಂಕೆಯ ಮೋಹಕ್ಕೆ ಒಳಗಾಗಿದ್ದ ಸೀತೆಗೆ ಲಕ್ಷ್ಮಣನ ಮಾತುಗಳು ರುಚಿಸುವುದಿಲ್ಲ. ಒಂದು ವೇಳೆ ಆಕೆ ಅವನ ಮಾತಿಗೆ ಒಪ್ಪಿ ಸುಮ್ಮನಾಗಿದ್ದರೆ ಮುಂದೆ ಕಥೆ ಸಾಗುತ್ತಿರಲಿಲ್ಲ. ವಿಧಿಯ ಕೈಯಲ್ಲಿ ಸೀತೆ, ಸುವರ್ಣ ಮೃಗ ಎಲ್ಲವೂ ಬರೀ ಪಾತ್ರಗಳಲ್ತೆ. ಸಾಕ್ಷಾತ್ ಶ್ರೀ ರಾಮಚಂದ್ರನ ಮಡದಿ ಸಾಮಾನ್ಯ ಸ್ತ್ರೀಯಂತೆ ಮೃಗದ ದಿವ್ಯ ಸೌಂದರ್ಯದಗ್ಗಳಿಕೆಗೆ ಮಾರುಹೋಗುವುದರಲ್ಲಿ ವಿಧಿಯ ವಜ್ರರಕ್ಷೆಯಿದೆ. ಒಂದು ವೇಳೆ ಸೀತೆ ಆ ಜಿಂಕೆಯ ಲಾವಣ್ಯಕ್ಕೆ ಮಾರುಹೋಗದೆ ಹೋದರೂ ವಿಧಿಲೀಲೆಯ ಜಾಲಕ್ಕೆ ಖಂಡಿತಾ ಬೀಳಲೇಬೇಕಾಗುತ್ತದೆ.

ಅರಮನೆಯ ಸುಖದ ಸುಪತ್ತಿಗೆಯಲ್ಲಿ ತೇಲಾಡುವುದನ್ನು ಬಿಟ್ಟು, ಸಕಲ ರಾಜ್ಯ ಸಂಪತ್ತನ್ನು ತ್ಯಜಿಸಿ ಪತಿಯೇ ಸರ್ವಸ್ವ ಎಂದು ನಂಬಿ ಹದಿನಾಲ್ಕು ವರ್ಷಗಳ ವರೆಗಿನ ವನವಾಸವನ್ನು ಕೈಗೊಂಡು ಭೀಕರ ಘೋರಾರಣ್ಯದಲ್ಲಿ ತಿರುಗಿ, ಬಳಲಿದರು. ಇಲ್ಲಿಯವರೆಗೂ ಏನನ್ನೂ ಬಯಸಿ ಕೇಳದ ಸೀತೆ ಈಗ ಜಿಂಕೆಯೊಂದರ ರೂಪಿಗೆ ಮಾರು ಹೋದಳೆಂದರೆ ಆಶ್ಚರ್ಯವಲ್ಲವೆ? ಅದು ವಿಧಿ ಜಾಲ ಎಂಬುದರಲ್ಲಿ ಸಂಶಯವಿಲ್ಲ. ಗುಣವತಿ, ಪ್ರಬುದ್ಧೆಯಾದ ಸೀತೆ ಕೂಡ ಸ್ವರ್ಣ ಮೃಗದ ಮೋಹಕ್ಕೆ ಒಳಗಾಗಿ ತನ್ನ ಹೆಣ್ತನದ ಸಾಮಾನ್ಯತೆಯನ್ನು ಪ್ರದರ್ಶಿಸುತ್ತಾಳೆ. ಲಕ್ಷ್ಮಣನ ಮಾತನ್ನು ನಿರ್ಲಕ್ಷಿಸಿ ಅಪಾಯವನ್ನು ತಾನಾಗಿಯೇ

---

[೧] ಅದೇ, ಪುಟ ೨೩೭, ಸಾಲು ೧೩೩–೧೩೫.

ತಂದುಕೊಳ್ಳುತ್ತಾಳೆ. ಇದು ವಾಲ್ಮೀಕಿಯಲ್ಲಿಯೂ ಸೊಗಸಾಗಿ ಮೂಡಿಬಂದಿದೆ. 'ನಾವು ವನವಾಸವನ್ನು ಮುಗಿಸಿ ಪುನಃ ರಾಜ್ಯಕ್ಕೆ ಹಿಂದಿರುಗಿ ಹೋದ ಮೇಲೆ, ನಮ್ಮ ಅಂತಃಪುರದಲ್ಲಿ ಈ ಮೃಗವು ಒಂದು ಅಲಂಕಾರವಾಗಿರುವುದು. ನಾಥ ನನ್ನ ಮೈದುನನಾದ ಭರತನಿಗೂ ನನ್ನ ಅತ್ತೆಯವರಿಗೂ ಈ ಮೃಗರೂಪವು ಎಷ್ಟು ವಿಸ್ಮಯವನ್ನುಂಟು ಮಾಡುವುದೋ! ಇದು ಬದುಕಿರುವಂತೆಯೇ ನಿನಗೆ ಸಿಗದಿದ್ದರೆ ಪುರುಷೋತ್ತಮ, ಒಂದು ವೇಳೆ ಇದನ್ನು ಸಂಹರಿಸಬೇಕಾಗಿ ಬಂದರೆ ಸುವರ್ಣಮಯವಾದ ಚರ್ಮ ದೊರೆಯುತ್ತದೆ. ಹುಲ್ಲಿನ ಚಾಪೆಯ ಮೇಲೆ ಈ ಚರ್ಮವನ್ನು ಹಾಸಿ ಅದರಲ್ಲಿ ಕುಳಿತುಕೊಳ್ಳಬೇಕೆಂದು ನನಗೆ ಆಸೆ! ನಾನು ಹೀಗೆ ಸ್ವೇಚ್ಛೆಯಿಂದ ಹಠಮಾಡುವುದು ಕ್ರೂರತನವೇನೂ ಹೌದು: ಸ್ತ್ರೀಯರಿಗೆ ಯೋಗ್ಯವಲ್ಲ, ಆದರೂ ಈ ಪ್ರಾಣಿಯ ಸುಂದರಾಕೃತಿಯು ನನ್ನ ಕೌತುಕವನ್ನು ಕೆರಳಿಸಿದೆ. ಚಿನ್ನದ ರೋಮಗಳು, ಇಂದ್ರನೀಲಮಣಿಯ ಕೊಂಬುಗಳು; ಬಾಲಸೂರ್ಯನ ಹೊಂಬಣ್ಣ ತಾರಾಪುಂಜದಂತಿರುವ ಬೆಳ್ಳಿಯ ಚುಕ್ಕೆಗಳು ಇವುಗಳಿಂದ ಈ ಮೃಗವು ನನಗೆ ವಿಸ್ಮಯವನ್ನು ಹುಟ್ಟಿಸಿದೆ' ಎನ್ನುತ್ತಾಳೆ.

ಶ್ರೀ ರಾಮಚಂದ್ರನು ಸತಿಯ ಬಯಕೆಯನ್ನು ಪೂರೈಸಲು ಮುಂದಾಗುತ್ತಾನೆ. ಲಕ್ಷ್ಮಣನಿಗೆ ಗೋಚರವಾದ ದೈತ್ಯಮಾಯೆ, ಬಾಲ್ಯದಿಂದಲೂ ತಾಟಕಿ, ಮಾರೀಚ, ಖರದೂಷಣ, ಶೂರ್ಪನಖಿ ಮೊದಲಾದ ಜಾಲ್ಮ ನಿಶಾಚರರ ಕ್ಷತ್ರಿಮ ಮಾಯೆಯ ಅರಿವಿದ್ದ ಶ್ರೀ ರಾಮನಿಗೆ ಅಗೋಚರವಾಯಿತೆಂಬುದು ಅಸಂಭವನೀಯ ಸಂಗತಿ. ಅಲ್ಲದೆ "ನೀನಂದಂತೆ ಮೃಗರೂಪಿಯಾಗಿರ್ದೊಡಾತನಂ ಕೊಲ್ವದುಂ ಕರ್ತ್ತವ್ಯಮಲ್ತೆ? ಪಿಡಿದಪೆನಲ್ಲದಿರೆ ಕೊಂದೆ ತಂದಪೆನ್' ಎಂದು ಲಕ್ಷ್ಮಣನಿಗೆ ಹೇಳಿ ಹೊರಡುತ್ತಾನೆ.

"ಮಲ್ಲಗಚ್ಚೆಯಂ
ಕಟ್ಟಿ, ಆ ಸಿಡಿಲಾಳ್, ಧನುರ್ಬಾಣ ಪಾಣಿಯುಂ
ಕಾಟಿಖಳ್ಗ ಭೀಕರನುಮಾಗಿ, ಮೃಗನೀಚನಂ
ಬೆಂಬತ್ತಿದನು ದೈತ್ಯಮಾರೀಚನಂ"[೧]

ರಘುರಾಮನ ಬೇಟೆ ದೇವತೆಗಳಿಗೆ ಮಾತ್ರವಲ್. ರಾವಣನಿಗೂ ಮನೋಹರವಾಥ ನೋಟವಾಯಿತು; ಅವನ ಮೆಯ್ ನವಿರೆದ್ದಿತು. ಆ ಮೃಗ ಇಲ್ಲಿ ಸುಳಿದು ಅಲ್ಲಿ ಅಡಗಿ, ಒಮ್ಮೆ ಹೊಳೆದು, ಒಮ್ಮೆ ನುಸುಳಿ, ತಗ್ಗನಿಳಿದು, ಉಬ್ಬನೇರಿ, ಮುಷ್ಟಿಗೆ ಸಿಕ್ಕಿತೆಂಬಂತೆ ಹತ್ತಿರ ಸಾರಿ ಒಡನೆ ಜಾರಿ, ಚಿಮ್ಮುತ್ತ ಜುಣುಗುತ್ತ ಬಹುದೂರ ರಾಮನನ್ನು ಸೆಳೆದೊಯ್ದಿತು. ಕಡೆಗೆ ವ್ಯಾಕರಣ ಛಂದಸ್ಸಲಂಕಾರ ಸೂತ್ರಗಳಿಂದ ಕಾವ್ಯಶ್ರೀಯನ್ನು ಮೆಚ್ಚಿಸುವ ದಡ್ಡತನವನ್ನುಳಿದು ಹೃದಯಾವೇಶಕ್ಕೆ ಶರಣಾಗುವ ಮಹಾಕವಿಯಂತೆ ಹರಿಣನ ಮೈಯಲ್ಲಿ ಶ್ರೀರಾಮ ಬಾಣವನ್ನು ಹೂಡಿದನು.

ಶಾಶ್ವತವನರಿಯಲ್ಕೆ ನಶ್ವರದ ಹೃದಯಮಂ
ಭೇದಿಸುವ ಕವಿಯ ದರ್ಶನದಂತೆ, ಖರಶರಂ

---

[೧] ಅದೇ, 'ಓ ಲಕ್ಷ್ಮಣಾ' ಪುಟ ೨೩೪, ಸಾಲು ೨೭೬–೧೭೯.

ಛಿದ್ರಸಲ್ಕಾ ಕಿತವ ಪಶುಕಳೆ ಬರದಿಂದೆ
ಜಗುಳ್ದುದು ನಿಶಾಚರಾಕೃತಿ, ಮಿಥ್ಯ ಬಿರಿಯಲ್ಕೆ
ಸತ್ಯಂ ಪ್ರತ್ಯಕ್ಷಮಪ್ಪಂತೆವೋಲ್,ಕಣ್ ಬೆರ್ಚ್ಚೆ
ನೋಡುತಿರಲಾಯ್ತು ಕಿವಿಯುಂ ಬೆಚ್ಚುವಂತೆ: 'ಓ
ಲಕ್ಷ್ಮಣಾ! ಓ ಲಕ್ಷ್ಮಣಾ! ಓ ಲಕ್ಷ್ಮಣಾ, ಓ!
ಎಂಬ ಮಹಾಧ್ವಾನಮಸುರನುಸಿರಿಂದುರ್ಕ್ಕಿ
ರೋದಿಸಿತು. ಗಗನಗಿರಿವನ ಗುಹಾಮುಖಂಗಳಿಂ
ಪ್ರತಿರಣಿತಮಾಗಿ! ಧಿಗಿಲೆಂದುದೆದೆ ರಾಮಂಗೆ
"ಓ! ಲಕ್ಷ್ಮಣಾ, ಲಕ್ಷ್ಮಣಾ, ಲಕ್ಷ್ಮಣಾ, ಓ!"
ಕೂಗನಾಲಿಸಿ ನಡಿಗಿದಳ್ ಪೃಥ್ವಿ ತರುಶಿಲಾ
ಗರ್ಭಂಗಳುಂ ತಲ್ಲಣಗೊಂಡುವಾ ಕರೆಯ
ಮೊರೆಗೇಳ್ದು, ನಿಲ್ಲಿಸಿದುವುಲಿಗಳಂ ಚಕಿತ ಖಗ
ಸಂಕುಲಂ; ಮಧ್ಯಾಹ್ನಮಾಲಿಸಿತು ನಿಶ್ಯಬ್ದ
ವಿಸ್ಮಯ ಭ್ರೂಮುದ್ರೆಯಿಂ; ಆ ತೆರೆ ತೆರೆಯ ನಡೆಯ
ದಿನಿಗುದುರೆ ಮುಟ್ಟಿತೆಲೆವನೆಗೆ, ನೆಗೆನೆಗೆದೋಡಿ
ಕೊನೆಗೆ; ಓ ಲಕ್ಷ್ಮಣಾ ಲಕ್ಷ್ಮಣಾ ಲಕ್ಷ್ಮಣಾ ಓ![೧]

ಅರಣ್ಯರೋದನದ ಆ ದನಿ ರಾಮಭಾರ್ಯೆಯ ಕಿವಿಯನ್ನು ಬಡಿಯುತ್ತದೆ. ಆ ದನಿಯನ್ನು ಕೇಳಿ ರಾಮನೇ ಬೆದರಿದನೆಂದರೆ ಇನ್ನೂ ಸೀತೆಯ ಗತಿಯೇನಾಗಿರಬಹುದು. ಲಕ್ಷ್ಮಣನನ್ನು ಕೂಗಿ ರಾಮನಿಗೆ ಕೇಡೊದಗಿದೆ ಓಡು, ರಾಮನಿಗೆ ನೆರವಾಗು ಎಂದು ಗದ್ಗದಿಸುತ್ತಾಳೆ. ರಾಕ್ಷಸರ ಮಾಯೆಯನ್ನು ತಿಳಿದಿದ್ದ ಲಕ್ಷ್ಮಣ ಅತ್ತಿಗೆಯನ್ನು ಸಮಾಧಾನಿಸದರೂ ನಂಬದೆ ಹೋಗಿ ನೋಡುವಂತೆ ಒತ್ತಾಯಿಸುತ್ತಾಳೆ. ಮತ್ತೆ ಲಕ್ಷ್ಮಣೋಗ್ರೋಳ್ದನಿ ಕೇಳುತ್ತದೆ.

"ಭ್ರಾತೃಘಾತಕ ಪಾಪಿ,
ಸಾಯಿ, ನಡೆ, ತೊಲಗು ಕಣ್ಬೊಲದಿಂ! ಸುಮಿತ್ರಾತ್ಮ
ಜಾತ ಪಾತಕವೊ ನೀಂ! ಗೋಮುಖವ್ಯಾಘ್ರನೋಲ್
ಬಂದೆಯೆಮೊಡಗೂಡಿ, ಪೂರ್ವಜನ್ಮದ ಪಾಪದಾ
ಕರ್ಮಪಾಕಂ ಬರ್ಪವೋಲ್!"[೨]

ಹೀಗೆ ಸೀತೆ ನಿಂದಿಸುತ್ತಾಳೆ. ಈ ಸನ್ನಿವೇಶವನ್ನು ಕುವೆಂಪು ಅತ್ಯಂತ ಸಮರ್ಥವಾಗಿ ಚಿತ್ರಿಸಿದ್ದಾರೆ. ವಾಲ್ಮೀಕಿಯ ರಾಮಾಯಣದಲ್ಲಿನ ಸನ್ನಿವೇಶಕ್ಕಿಂತಲೂ ಉತ್ತಮವಾಗಿ ತಂದಿದ್ದಾರೆ. ಮಹಾಪ್ರಜ್ಞಾಶೀಲಮೇರು ಲಕ್ಷ್ಮಣನ ಪಾತ್ರ ನಿರೂಪಣೆ, ಸೀತೆಗೆ ಗಂಡನಿಗೆ ವಿಪತ್ತು

---

[೧] ಅದೇ, ಪುಟ ೨೪೧–೨೪೨, ಸಾಲು ೨೬೦–೨೭೭.

[೨] ಅದೇ, ಪುಟ ೨೪೫, ಸಾಲು ೨೫೪–೨೫೮

ಒದಗಿರಬಹುದಾದ ಶಂಕೆಯಿಂದಲೂ ಉತ್ಕಟಭೀತಿ, ಅತೀವ ದುಃಖ ಮತ್ತು ಚಿತ್ತ ವೈಕ್ಲವ್ಯ ಈ ಮೊದಲಾದ ಒಂದೊಂದು ಕ್ರಿಯೆಯನ್ನು ಮನೋಜ್ಞವಾಗಿ ಕಡಿದು ಒಟ್ಟು ಸನ್ನಿವೇಶವನ್ನು ಅತ್ಯಂತ ಭ್ರಾಜಿಷ್ಣುವನ್ನಾಗಿಸಿದ್ದಾರೆ. ವಾಲ್ಮೀಕಿ ರಾಮಾಯಣದಲ್ಲಿ ಸೀತೆ ಅತ್ಯಂತ ಕಠಿಣವಾಗಿ ದುಸ್ಸಹ್ಯವಾದಂತಹ ಹೇಯ ನುಡಿಗಳಿಂದ ನಿಂದಿಸುತ್ತಾಳೆ. ಸನ್ನಿವೇಶ ಎಷ್ಟೇ ಘೋರವಾಧರೂ ಸಹ ಸುಂಸ್ಕೃತಳಾದ ಸ್ತ್ರೀ ತನ್ನ ವರ್ತನೆಯನ್ನು ಸ್ವಲ್ಪ ಹೆಚ್ಚು ಕಡಿಮೆ ಮಾಡಬಹುದೇ ಹೊರತು ಅದರ ಅಭಿವ್ಯಕ್ತಿಯಲ್ಲಿ ತನ್ನ ತನದ ಮಟ್ಟವನ್ನು ಕೀಳುಗೈದು ಅಸಭ್ಯ ಸ್ತ್ರೀಯಂತೆ ನಡೆದುಕೊಳ್ಳಲಾರಳು.

ಮಾಸ್ತಿ ಅವರು ಸಹ ಇದನ್ನು ವಿಶ್ಲೇಷಿಸುತ್ತಾ 'ಲಕ್ಷ್ಮಣನು ತನ್ನ ವಿಷಯದಲ್ಲಿ ದುರಭಿಪ್ರಾಯದಿಂದ ಅನುಸರಿಸಿ ಬಂದಿರುವನೆಂದೂ ಅಣ್ಣ ಸತ್ತರೆ ಸಾಯಲಿ ಅತ್ತಿಗೆ ನನಗೆ ದಕ್ಕುವಳು ಎಂದು ಮೈದುನನಿಗೆ ಬಾಯಿಬಿಟ್ಟು ಹೇಳಿ ನಿರ್ದೋಷಿಯ ಹೊಟ್ಟೆಯನ್ನು ಉರಿಸಿ ಕಳುಹಿಸಿದಳು. ಇದೆಲ್ಲ ಯಾವ ಉದ್ಧಾರಕ್ಕೆ? ರಾವಣನು ತನ್ನನ್ನು ಹೊತ್ತುಕೊಂಡು ಹೋಗುವಂತೆ ಅನುಕೂಲವನ್ನು ಕಲ್ಪಿಸುವುದಕ್ಕೆ ಅವಳು ಲಕ್ಷ್ಮಣನಿಗೆ ಹೇಳಿದ ಮಾತನ್ನು ತಿರುಗಿಸಿ ಹೇಳುವುದಾದರೆ, ರಾಮನೊಡನೆ ಇದ್ದು ಸಾಕಾಯಿತು. ಯಾರಾದರೂ ಬಂದು ನನ್ನನ್ನು ಕರೆದುಕೊಂಡು ಹೋಗಲು ಅವಕಾಶವಿರಲಿ, ಎಂದು ಲಕ್ಷ್ಮಣನನ್ನು ಅಟ್ಟಿದಳು ಎನ್ನಬಹುದು" ಎನ್ನುತ್ತಾರೆ.

> ಎಲವೋ ಲಕ್ಷ್ಮಣಾ,
> ಎಳೆಯ ಮುಳ್ ಚುಚ್ಚಲ್ಕೆ ನೋವಲ್ತೆದುಲೆ ಮೆಚ್ಚು;
> ಬೆಳೆದರಾ ಮುಳ್, ಅದರ ಕಿಚ್ಚು ಮುತ್ತಹುದೆ ಪೇಳ್?
> ಎಳೆಯ ಕರು ಬೆಳೆದ ಮೇಲದರ ತಾಯನೆ ಬೆದೆಗೆ
> ಬಯಸಿದಪುದಯ್ಯೊ! . . . ಮನದನ್ನ, ನನ್ನಂ ನಾನೇ
> ಕೊಲಿಸಿದೆನೆ? ತನ್ನೈದೆದಾಳಿಯೂ ತನ್ನಕಯ್
> ಕಿತ್ತೆಸೆದುದಯ್ಯಯ್ಯೋ!"[೧]

ಹೀಗೆ ವ್ಯಂಗ್ಯವಾಗಿ ಆಡಿಸಿ ಮೂಲದ ಸೀತೆಯ ಮಾತಿನ ಕಠೋರತೆಯನ್ನು ಒರಟು ನಗ್ನತೆಯನ್ನು ಕಡಿಮೆಮಾಡಿ ಕಲಾತ್ಮಕವಾಗಿಸಿರುವುದನ್ನು ಕಾಣಬಹುದು. ಅಲ್ಲದೆ ತಾಳ್ಮೆಗೆಟ್ಟ ಸೀತೆಯ ನುಡಿಗಳಿಂದ ಬೇಸತ್ತ ಲಕ್ಷ್ಮಣ 'ಹೆಣ್ಣಿನ ಹಣೆಯ ಬರಹಮಿಂತುಟೆವಲಂ' ಎಂದು ಹೇಳಿ ಹೊರಡುತ್ತಾನೆ. ಅತ್ತಿಗೆಯ ಕರ್ಣಕಠೋರ ನುಡಿಗಳಿಂದ ನೊಂದ ಲಕ್ಷ್ಮಣನ ಬಗ್ಗೆ ಕವಿ 'ಹಾ ಬೇರ್ಗ್ಗೊಯ್ದುದತ್ತಿಗೆಯ ಬಾಯ್ಗತ್ತಿ ಊರ್ಮಿಳಾ ಪ್ರಿಯನ ನಿಶ್ಚಲತೆಯಂ' ಎನ್ನುವಾಗಲೂ 'ಹೇ ಮಾತೇ, ಮನ್ನಿಸೆನ್ನಂ ರಾಮನಾಣೆಯಂ ಮೀರಲಾರದೆ ಪೇಳ್ದನಾದೊಡಂ ನಿಮ್ಮಾಣೆ ಹೋಗಿ ಬರುವೆನು ಬೇಗದಿಂ : ನಡೆಯಿಮೆಲೆವನೆಗೆ! ಎಂದು ಹಿಂದು ಹಿಂದಕೆ ನೋಡುತೋರಿದನ್' ಎಂಬುದನ್ನು ಕಾಣುವಾಗಲೂ ಸಹ ಲಕ್ಷ್ಮಣನ ಬಗ್ಗೆ ಪಾಪ ಎನಿಸಿ ಅವನ ಬಗ್ಗೆ ಅತಿಯಾದ

---

[೧] ಅದೇ, ಪುಟ ೨೪೫, ಸಾಲು ೨೬೫-೨೬೯

ಪ್ರೀತ್ಯಾಭಿಮಾನಗಳು ಮೂಡಿ ಅವನನ್ನು ಗೌರವ ಭಾಜನ ವ್ಯಕ್ತಿಯನ್ನಾಗಿ ಮಾಡಿಸುತ್ತವೆ. ಇಡೀ ರಾಮಾಯಣದರ್ಶನದಲ್ಲಿ ಲಕ್ಷ್ಮಣನ ಪಾತ್ರವು ಕಳೆಕಟ್ಟಿ ಬೆಳಗುತ್ತಿರುವುದು ಈ ಸಂದರ್ಭದಲ್ಲೇ.

ರಾಮನನ್ನು ಹುಡುಕಿಕೊಂಡು ಲಕ್ಷ್ಮಣ ಹೋದ ಮೇಲೆ ಏಕಾಂತಳಾಗಿ ಭೀತಳಾಗಿ ನಿಂತಿರುವ ಸೀತೆ ಕವಿಗೆ ಕಣ್ಣಿಗೆ,

ನಿಂದಳಾ
ಮುಳ್ಳುಬೇಲಿಯ ತಡಬೆಯಂ ನೆಮ್ಮಿ, ಶೂನ್ಯಮಂ
ತನ್ನ ಬಾಳಡವಿವಟ್ಟೆಯ ಪಾಳನೀಕ್ಷಿಸುವವೋಲ್![೧]

ಈಗ ರಾವಣನ ದಾರಿ ಸುಗಮವಾಗುತ್ತದೆ. ಈ ಸನ್ನಿವೇಶ ವಾಲ್ಮೀಕಿಯಲ್ಲಿ 'ಅರಣ್ಯದಲ್ಲಿ ಅಣ್ಣತಮ್ಮಂದಿರಾದ ರಾಮಲಕ್ಷ್ಮಣರಿಬ್ಬರೂ ಇಲ್ಲದಿರುವಾಗ ಸೀತೆಯು ಸೂರ್ಯ ಚಂದ್ರರಿಬ್ಬರೂ ಇಲ್ಲದ ಸಂಧ್ಯೆಯಂತಾಗಿದ್ದಳು. ಕಾರ್ಗತ್ತಲೆಯು ಸಂಧ್ಯೆಯನ್ನು ಸಮೀಪಿಸುವಂತೆ ಬಲಾಢ್ಯವಾದ ರಾವಣನು ಸೀತೆಯ ಬಳಿಗೆ ಬಂದನು' ಎಂದು ಹೇಳುತ್ತಾರೆ. ದರ್ಶನದಲ್ಲಿ ಹೀಗೆ ಬರುತ್ತದೆ.

ವ್ಯೋಮಗಸ್ಯಂದನದೊಳಡಗಿ ರಥಿ ರಾವಣಂ
ನೋಡಿದನು ಮನ್ಮಥ ಸತಿಯ ರತಿಯ ಹೆಗಲೆಣೆಯ
ದಶರಥ ಸುತನ ಸತಿಯನೊರ್ವಳಂ ಚಾತಕಂ
ಮಳೆಗೆ ಕಾತರಿಪಂತೆ, ಸೀತೆಯ ಚೆಲುವನೀಂಟೆ
ತವಕಿಸುತಸುರನಕ್ಷಿ ಪಕ್ಷಿ[೨]

ಮುಂದಿನ ಅಶುಭ ಸೂಚಕವಾಗಿ ಎಂದೂ ಇಲ್ಲದಂತಹ ಕಳವಳ ಹೃದಯವನ್ನು ಆವರಿಸುತ್ತದೆ. ಅದನ್ನು ಬಲವಂತದಿಂದ ತಳ್ಳಿ 'ಸುಟ್ಟರೆಯಾಗಿ ತಿರ್‍ರನೆ ಸುಳಿದು ಸುತ್ತಿ' ಧರೆಗಿಳಿಯುತ್ತಾನೆ. ಅನಂತರ ಕಪಟ ಋಷಿಯ ವೇಷವನ್ನು ಧರಿಸಿ, ಗೀರ್ವಾಣ ಭಾಷೆಯಲ್ಲಿ ಸ್ವಸ್ತಿಯನ್ನು ಓಂಕಾರವೆರಸಿ ಹೇಳಿ ಮಂತ್ರಘೋಷಗಳನ್ನು ಜಪಿಸುತ್ತ ಎಲೆಮನೆಯ ಬೇಲಿಯನ್ನು ದಾಟುತ್ತಾನೆ. ಸಹಜ 'ಯತಿಗತಿಯ ವಿನಯವಿಲ್ಲದ' ಮುನಿಯ ನಿಲವಿನ ಭಂಗಿಯಾದರೂ ಆ 'ನೃಪದರ್ಪಸಂಗಿ'ಯನ್ನು ನೋಡಿದ ವಿದೇಹರಾಜತನಯೆ ಸಂಶಯ ಭೀತೆಯಾಗಿರುವಾಗ ಆ ರಾಕ್ಷಸ ತನ್ನ ನೋಟದಿಂದಲೇ ಬೇಟವನ್ನು ಸಾರುವ ಹಾಗೆ ನೋಡುತ್ತಾನೆ. ಈ ಸನ್ನಿವೇಶದಲ್ಲಿ

ನಿಂತುದು ಗಾಳಿ
ಬೆದರಿ, ಗೋದಾವರಿಯ ಹೊನಲ ನಡೆ ಹೆಪ್ಪಾಯ್ತು
ಚಲನೆಗಳ ನುಡುಗಿದವು ಮರಬಳ್ಳಿಗಳ ಖಗಗಳಿಗೆ
ಮುಳ್ಗಿದತ್ತಿಂಚರಂ . ಪರ್ವತಾರಣ್ಯಗಳ
ಸ್ತಬ್ಧಮಾಧವು ರೌದ್ರಮಾ ದೈತ್ಯ ದೃಷ್ಟಿಯ ಭೀತಿ

---

೧ ಅದೇ, ಪುಟ ೨೪೬, ಸಾಲು ೩೮೧–೩೮೩
೨ ಅದೇ, ಪುಟ ೨೪೬, ಸಾಲು ೩೮೪–೩೮೮

ಬಡಿದಂತೆ ನಿಂದಳಯ್ ಪ್ರಕೃತಿ ತಾಂ ಜನಕಜಾ
ಹೃತ್ಕೃತಿಯೆನಲ್ ಪ್ರತಿಯೆನಲ್ ಚೇತನಂಗೆಟ್ಟು[೧]

ಸೀತೆ ಎಷ್ಟು ಚಾಲಕಿ ಹೆಣ್ಣುಮಗಳು ಅಂದರೆ ಕಪಟ ವೇಷಧಾರಿ ಎಂದು ಗೊತ್ತಾಗುತ್ತಲೆ ತನ್ನ ಪತಿ, ಮೈದುನರು ಬರುವವರಗೆ ಮಾತಿನ ನೆಪವೊಡ್ಡಿ ನಿಲ್ಲಿಸಿಕೊಂಡಿರಲು ಆಲೋಚಿಸುತ್ತಾಳೆ. ತನ್ನ ಪರಿಚಯುವನ್ನು ಮಾಡಿಕೊಳ್ಳುತ್ತಾಳೆ. ಇವಳ ಕಾಲವಂಚನ ತಂತ್ರವನ್ನರಿತ ರಾವಣ ಅವಳನ್ನು ಕುರಿತು, 'ಎಲೆ ಏಣಾಕ್ಷಿ ನಿನ್ನಂಥವರನ್ನು ವಂಚಿಸುವುದು ಸರಿಯಲ್ಲ. ನಾನು ಲಂಕೆಯ ದೊರೆ. ದಶಕಂಠನೆಂಬ ಬಿರುದಿನ ರಾವಣ. ದಶರಥನ ಮಗನಿಗಿಂತ ಮೊದಲೆ ನಿನ್ನನ್ನು ಮೆಚ್ಚಿ ಬಂದವನು. ಬಿಲ್ಮುರಿಯುವ ವರವನ್ನು ಪಡೆದು ಬರುವಷ್ಟರಲ್ಲಿ ನಿನ್ನ ತಂದೆಯಿಂದ ವಂಚಿತನಾದೆನು. ಇಲ್ಲದಿದ್ದರೆ ನೀನಿಂದು ನನ್ನ ಮಡದಿ! ರಾಮ ಮೋಸದಿಂದ ಪಡೆದ ನನ್ನವಳನ್ನು ಮತ್ತೆ ಪಡೆಯಲು ಬಂದಿದ್ದೇನೆ. ವೇಷಾವೇಶಗಳೆರಡರಲ್ಲಿಯೂ ನಾನಿಂದು ಭಿಕ್ಷುಕ. ಕೃಪೆಯಿಟ್ಟು ನನ್ನೊಡನೆ ಬಾ, ಮರುದಿನವೆ ರಾಮನನ್ನು ಮರೆಯುವೆ' ಎಂದು ತನ್ನ ವೈಭವದ ನಿರೂಪವನ್ನು ತೋರಿಸುತ್ತಾನೆ. ಸೀತೆ ಅದನ್ನು ಕಂಡು ಹೇಸಿ ಮುಖ ತಿರುಗಿಸುತ್ತಾಳೆ. ಅವಳಲ್ಲಿ ಅದುವರೆಗೂ ಇದ್ದ ಭೀತಿ ಮರೆಯಾಗಿ ಕೋಪ ಉಕ್ಕುತ್ತದೆ.

ಮಾಣ್, ಆಡದಿರಸಹ್ಯಮಂ,
ನಿಶಾಚರ ಕುಲೇಶ್ವರ, ಸೊಲ್ಲದಿರಧರ್ಮಮಂ
ಕೋಣಪ ಕುಲಕುಠಾರ, ಸ್ವಾನಮೈರಾವತಕೆ
ಮಲೆವವೋಲೆನ್ನ ಮನದನ್ನಂಗೆ ಕರುಬುತಿಹೆ
ನೀನ್ ಲೇಪಿಸಿದ ಜೇನಿನಾಸೆಗಸಿಧಾರೆಯಂ
ನೆಕ್ಕಲೆಳಸುತಿಹೆ. ಕಾಮಿಸಿದೆ ನರಿ ಕೇಸರಿಯ
ಪೆಣ್ಗೆ: ನವಿಲಿನ ಸಂಗಸುಖಕೆಳಸುತಿದೆ ಹದ್ದು
ಪೊನ್ನೆನ್ನ ಮನದನ್ನನಯ್; ನೀನೊ ಕಬ್ಬುನಂ
ಶ್ರೀಗಂಧದನುಲೇಪನಕ್ಕೆಣೆ ರಘೂದ್ವಹಂ;
ಹೊಲೆಗೆಸರಿಗೆಣೆ ನೀನ್!"[೨]

ತನ್ನ ಹೆಸರನ್ನು ಕೇಳಿದ ಮಾತ್ರದಿಂದಲೇ ಲೋಕವೆಲ್ಲ ಹೆದರಿ ತತ್ತರಿಸುವಾಗ ಸೀತೆ ತನ್ನ ಬಗ್ಗೆ ಆಡಿದ ಕೀಳುನುಡಿಗಳನ್ನು ಕೇಳಿಕೊಂಡು ಸುಮ್ಮನಿರಲು ಸಾಧ್ಯವಿಲ್ಲ ಆದರೂ ಅವಳ ನುಡಿ ಅವನಿಗೆ ಪ್ರಿಯವಲ್ಲ; ಅವು ಅಮೃತಸಮ 'ಮುನಿಯೆ ನಾಂ ನಿನ್ನ ಕೊರಳಿನ ಸುಧೆಯಗರಳಕ್ಕೆ ನಲ್ಲೆಯೊಪ್ಪಿಗೆ ಒಲ್ಲೆ ಎಂಬ ನಾಣ್ನುಡಿಯಂತೆ, ನಿನ್ನ ತುಟಿ ನಿನ್ನೆರ್ದೆಯನಾಡುತಿರ್ಪುದು, ನಟಿಸಿ ನಿಂದೆಯಂ, ಬೇಟಕೆ ಬಲತ್ಕಾರಮೋರೊರ್ಮೆ ಇಷ್ಟ ಸತ್ಕಾರಮೆಂಬರೆಲೆ ಯೌವಲಾವಣ್ಯೆ . . . ಬಾ ನನ್ನ ಲಂಕಾಲಕ್ಷ್ಮೀ ಬಾ!" ಎಂದು ಮಾಯೆಯಿಂದ ಸುತ್ತಲೂ ಮಂಜಿನ ಮೋಡವನ್ನು ಬರಿಸಿ ತೇಲುಗಣ್ಣಾಗಿ ಬಳ್ಳಿಯನು ತಬ್ಬಿದ

---

[೧] ಅದೇ, ಪುಟ ೨೪೮, ಸಾಲು ೪೩೪-೪೩೯
[೨] ಅದೇ, 'ಓ ಲಕ್ಷ್ಮಣಾ' ಪುಟ ೨೪೯-೨೫೦ ಸಾಲು ೪೭೮-೮೭

ಸೀತೆಯನ್ನು ಮದಿಸಿದ ಆನೆ ಎಳೆಯುವ ಹಾಗೆ ಎಳೆದುಕೊಂಡು 'ಬಾನ್ದೆರನೇರಿ' ಸಾಗುತ್ತಾನೆ. ಮೇಲಿನ ಒಂದೊಂದು ವಾಕ್ಯವೂ ಅತಿ ಅಪೂರ್ವವಾಗಿ ಸತ್ವಪೂರ್ಣವಾಗಿ ಮೂಡಿ ಬಂದಿವೆ. ಉಪಮೆ ರೂಪಕಗಳಂತು ಉದ್ದಕ್ಕೂ ಕಾವ್ಯದ ಜೀವಾಳವಾಗಿವೆ. ಲಕ್ಷ್ಮಣನ ಮಹಾ ಬಾಹುಗಳ ರಕ್ಷಣೆಯನ್ನು ನೂಕಿದ ಸೀತೆಗೆ 'ಕೈಲಾಸವನ್ನೇ ತೂಗಿ ತೊನೆದಾ' ರಾವಣನ ಬಾಹುಗಳು ರಾಹುವಿನ ಹಾಗೆ ಹಿಡಿದು ಎಳೆದಾಗ ಆಶ್ರಯಿಸಿದ ಆ ಬಳ್ಳಿಗಳು ರಕ್ಷಿಸಲು ಸಾಧ್ಯವೇ? ಇಲ್ಲಿ ಕವಿ ರಾವಣನ ಕ್ರೂರ ಪರಾಕ್ರಮವನ್ನು ಅಬಲೆ ಸೀತೆಯ ಅಸಹಾಯಕತೆಯನ್ನೂ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಎಲೆವನೆಗೆ ಹಬ್ಬಿದ ಬಳ್ಳಿ ಒಂದಾದರೆ ಸೀತೆ ಮತ್ತೊಂದು ಬಳ್ಳಿ ಆದ್ದರಿಂದಲೇ 'ಬಳ್ಳಿಯಪ್ಪಿದ ಬಳ್ಳಿ' ಇಂತಹದನ್ನು ಮತ್ತವಾರಣ ಸೊಂಡಿಲಿನಿಂದ ಎಳೆಯುವಂತೆ ಎಳೆಯುತ್ತಾನೆ. ಉನ್ಮತ್ತ ರಾವಣ ಸೀತೆಯಾದರೋ ಸುಮಕೋಮಲೆ, ಸುಶ್ರೋಣಿ, ಲಘು ಶರೀರೆ, ರಾವಣನಾದರೋ ಮದಿಸಿದ ರಾಕ್ಷಸ. ಆದ್ದರಿಂದಲೇ ಈ ಹೋಲಿಕೆ ಬಂದಿದೆ ಇನ್ನು ರಾವಣ ಸೀತೆಯನ್ನು ಅಪಹರಿಸಿಕೊಂಡು ಹೋಗುವುದನ್ನು 'ಝುಗ ಝುಗಿಪ' ಕೆಂಡದ ಉರಿಚೆಲ್ವಿಗೆ ಮರುಳಾಗಿ ಆಸೆ ಪಟ್ಟು ಅದನ್ನು ಸೆರಗಿನಲ್ಲಿ ಹಾಕಿಕೊಂಡು ಓಡುವ ಹೆಣ್ಣಿಗೆ ಹೋಲಿಸಿದ್ದಾರೆ. ಇದು ಒಳ್ಳೆಯ ಅರ್ಥಗರ್ಭಿತವಾದ ಹೋಲಿಕೆಯಾಗಿ ಮೂಡಿಬಂದಿದೆ. ಕೆಂಡದ ಉರಿಯ ಚೆಲುವಷ್ಟೇ ಮನಸ್ಸಿಗೆ ಬಂತೇ ಹೊರತು ಅದು ಸುಡುತ್ತದೆಂಬ ಪ್ರಜ್ಞೆ ಬರಲಿಲ್ಲ. ಹೋಗಲಿ ಆ ಉರಿಯುವ ಕೆಂಡವಾದರೂ ಶಾಶ್ವತವಾಗಿ ಜೊತೆಯಲ್ಲಿರುತ್ತದೆಯೇ? ಅದೂ ಇಲ್ಲ. ಅದು ಸೆರಗನ್ನು ಸುಡುವವರೆಗೆ ಮಾತ್ರ ಅಲ್ಲಿರುತ್ತದೆ. ಅನಂತರ ಬಿದ್ದು ಹೋಗುತ್ತದೆ. ಆದರೆ ಹತ್ತಿಕೊಂಡ ಸೆರಗಿನ ಉರಿ ಆವರಿಸಿ ಇಡೀ ದೇಹವನ್ನೇ ಸುಡುತ್ತದೆ. ಇಲ್ಲಿ ಸೀತೆಯನ್ನು ಅಪಹರಿಸಿದ ರಾವಣನ ಸ್ಥಿತಿಯೂ ಹೀಗೆ ಆಗುತ್ತದೆ. ಸೀತೆಯೂ ಸಹ ಒಂದು ಉರಿವಗೊಂಬೆ ರಾವಣ ಅವಳಿಂದ ಯಾವ ಗಳಿಗೆಯಲ್ಲೂ ಲವಲೇಶವೂ ಸುಖಪಡಲಿಲ್ಲ. ಆನಂದಪಡಲಿಲ್ಲ. ಅವನಿಗೆ ಅವಳು ಕೊಂಚವೂ ಒಲಿಯಲಿಲ್ಲ. ಬರಿ ಆಕೆಯ ಚೆಲುವನ್ನು ನೋಡಿ ಅಪಹರಿಸಿದ ಅವಳು ಲಂಕೆಯಲ್ಲಿದ್ದಷ್ಟು ಕಾಲವೂ ಅವನ ಹೃದಯವನ್ನು ಉರಿಸಿದಳು, ಲಂಕೆಗೂ ಉರಿಯನ್ನಿಟ್ಟಳು, ಸುಟ್ಟಳು.

ಒಟ್ಟನಲ್ಲಿ ರಾವಣನು 'ಬಳ್ಳಿಯಪ್ಪಿದ ಬಳ್ಳಿಯಂತಿದ್ದ' ಸೀತೆಯನ್ನಲ್ಲ ಹಿಡಿದೆಳೆದುದ್ದು, ಸುರುಳಿ ಸುತ್ತಿಕೊಂಡಿದ್ದ ಯಮನ ಪಾಶವನ್ನು' ರಾಮನ ಸತಿಯ್ನನು, ಯಮಭಯಂಕರಿಯನ್ನು, ತನ್ನ ಮೃತ್ಯುವನ್ನು ಕೊಂಡು ಹೋಗುತ್ತಾನೆ. ಲೋಕದ ಕಣ್ಣಿಗೆ, ಲೌಕಿಕ ನೀತಿಗೆ ಮೇಲಿನ ಅಂಶಗಳು ರಾಕ್ಷಸನ ಅನೀತಿಯುತ ನಡವಳಿಕೆಗಳಾಗಿ ಕಾಣುವುದು ಸಹಜ ಮತ್ತು ಸತ್ಯ. ಆದರೆ ಇದೇ ಸಮಯದಲ್ಲಿ ಇದರ ಹಿನ್ನೆಲೆಯಲ್ಲಿ ಮತ್ತೊಂದು ಅಂಶ ಧ್ವನಿಸುತ್ತದೆ.

ವಾಸ್ತವವಾಗಿ ರಾವಣ ಕೊಂಡು ಹೋಗುತ್ತಿರುವುದು ಮಂಗಳ ಲಕ್ಷ್ಮೀಯನ್ನು. ತನ್ನ ಬಹುಕಾಲದ ಘೋರ ಪಾಪವಿನಾಶಕ್ಕೆ ಔಷಧವನ್ನು ತನ್ನಾತ್ಮೋದ್ಧಾರದ ಕೃಪಾಶಕ್ತಿಯನ್ನ, ದೇವ ದೇವಿಯನ್ನ, ಸೀತೆ ರಾಕ್ಷಸ ಕುಲದ ಸ್ತ್ರೀಯರ ಐಯ್ದೆತನಕ್ಕೆ ಕಂಠಕಿಯಾಗಿ ಪರಿಣಮಿಸಿದರೂ ವಾಸ್ತವವಾಗಿ ಅವಳು. ಜಗತ್ತಿನಲ್ಲಿ ಹದಿಬದೆಯತನದ ಪರಮ ಪಾವಿತ್ರ್ಯವನ್ನು ಶ್ರೇಷ್ಠತೆಯನ್ನು ಜಗತ್ತಿಗೆ ಸಾರಲು ಬಂದ ಮಹಾಪತಿವ್ರತೆ, ಹದಿಬದೆಯರರಸಿ, ರಾವಣನಲ್ಲಿ ಜಗತ್ತನ್ನೇ ಮರಳು ಮಾಡುವ ರೂಪಿತ್ತು, ಅಲ್ಲದೆ ವಿತ್ತೇಶನನ್ನೇ ಗೆದ್ದು ತಂದ ಐಶ್ವರ್ಯವಿತ್ತು, ಯಮ

ಇಂದ್ರಾದಿಗಳೂ ಕೂಡ ಗಡಗಡ ನಡುಗುವ ಜಗಜ್ಜೇತ ಪರಾಕ್ರಮವಿತ್ತು, ಅಪಾರ ಪಾಂಡಿತ್ಯವಿತ್ತು. ಮಹಾಮಾಯಾವಿದ್ಯೆಯಿತ್ತು. ಇಷ್ಟಾದರೂ ಸೀತೆಯ ಪಾಲಿಗೆ ಅವೆಲ್ಲವೂ ತೃಣಕ್ಕೆ ಸಮಾನ.

ಸೀತೆಯ ಧಮನಿ ಧಮನಿಗಳ್ಲಲಿ ಹರಿಯುತ್ತಿದ್ದುದು ರಾಮನಾಮವೊಂದೆ, ಅದೇ ಅವಳ ಜಪತಪ. ಕೇವಲ ಒಬ್ಬ ರಾವಣನ ಕಾಮುಕ ನಡತೆಯಿಂದ ಪಾರಾಗುವುದನ್ನು ತೋರಿಸಲು ಜನಿಸಿದವಳಲ್ಲ ಆಕೆ. ಮುಂದೆ ಜನಿಸಬಹುದಾದ ಸಹಸ್ರ ಕಾಮುಕ ರಾವಣರಿಂದ ಸತಿ ಹೇಗೆ ಪಾರಾಗಬಲ್ಲಳು ಮತ್ತು ಪಾರಾಗಬೇಕು; ಸಕಲ ಸಂಪದಕ್ಕಿಂತ ಹದಿಬದಿಯ ಧರ್ಮವೇ ಹೇಗೆ ಸರ್ವೋತ್ಕೃಷ್ಟವಾದುದು ಎಂಬ ಪಾತಿವ್ರತ್ಯ ಧರ್ಮದ ದೀಕ್ಷೆಯನ್ನು ಕೊಡಲು ಜನಿಸಿದ ಮಹಾಸತಿ. ರಾವಣನು ಸೀತೆಯನ್ನು ಅಪಹರಿಸಲು ಅವನಲ್ಲಿದ್ದ ಜಾರ ಪ್ರವೃತ್ತಿ ಪ್ರೇರಣೆಯಾದರೂ ಅದೇ ಪ್ರಧಾನವಲ್ಲ. ಇದಕ್ಕೆ ಮುಖ್ಯ ಕಾರಣಳಾದವಳು ಇವನ ಸೋದರಿ ನೀಚ ಶೂರ್ಪನಖಿ. ಪಂಚವಟಿಯಲ್ಲಿ ತಮ್ಮ ಪಾಡಿಗೆ ತಾವಿದ್ದ ರಾಮಲಕ್ಷ್ಮಣರಲ್ಲಿಗೆ ಚಂದ್ರನಖಿಯಾಗಿ ಹೋಗಿ ಅವರನ್ನು ಮೋಹಿಸಿ, ರಾಮನ ಉಪದೇಶಗಳನ್ನು ನಿರ್ಲಕ್ಷಿಸಿ ಲಕ್ಷ್ಮಣನ ಖಡ್ಗದಿಂದ ಮುಖವನ್ನು ಘಾತಿಸಿಕೊಂಡು ಅಪಮಾನಿತಳಾಗಿ ಬಂದು ಖರದೂಷಣರಿಗೆ ದೂರಿ ಅವರನ್ನು ರಾಮಬಾಣಕ್ಕೆ ತುತ್ತಾಗಿಸಿ ಕೊನೆಗೆ ರಾವಣನನ್ನು ಪ್ರಚೋದಿಸುತ್ತಾಳೆ. ಈಕೆಯ ಪ್ರಚೋದನೆಗೆ ಕಾರಣ ಏನೇ ಇರಲಿ ಯಾವ ಸೋದರನಾಗಲಿ ತನ್ನ ಒಡಹುಟ್ಟಿದ ಸೋದರಿಯನ್ನು ಅಪಮಾನಗೊಳಿಸಿದವರ ಮೇಲೆ ಸಹಜವಾಗಿಯೇ ವೈರತಾಳುತ್ತಾನೆ. ಅಷ್ಟೇ ಅಲ್ಲದೆ ಮಹಾ ಪಾರಾಕ್ರಮಿಗಳೂ ಸೋದರರೂ ಆದ ಖರದೂಷಣರನ್ನು ಕೊಂದು, ಜನಸ್ಥಾನದ ತನ್ನ ಸಹಸ್ರಾರು ವಂಶಜರನ್ನು ನಿರ್ಮೂಲಗೊಳಿಸಿದ ರಾಮಲಕ್ಷ್ಮಣರ ಮೇಲೆ ಸೇಡು ತೀರಿಸಿಕೊಳ್ಳಲು ಮನಸ್ಸು ಮಾಡುವುದು ಅಪ್ರಕೃತವಾಗಲಾರದು. ಇಲ್ಲಿ ಕಾಮಕಾತುರತೆ ಮತ್ತು ಪ್ರತೀಕಾರ ಮನೋಭಾವಗಳು ದ್ಯೋತಗೊಳ್ಳುವುದನ್ನು ಕಾಣುತ್ತೇವೆ. ದ್ವೇಷದ ಅಗ್ನಿಗೆ ಕಾಮದ ಎಣ್ಣೆ, ಗರ್ವದ ಗಾಳಿ ಸೇರಿಕೊಂಡಾಗ ಉರಿ ಏಳುವಂತೆ ಅವನ ಪ್ರಚೋದನೆಗೆ ಮತ್ತೊಂದು ಕಾರಣವು ಸೇರಿಕೊಳ್ಳುತ್ತದೆ.

ದಶರಥನ
ಸುತನಿಗಿಂ ಮೊದಲೆ ನಿನ್ನಂ ಮೆಚ್ಚಿ ಬಂದವಂ!
ಬಿಲ್ಮುರಿವ ಬಲ್ಮೆಯಂ ಪಡೆದು ಬರ್ಪನಿತರೊಳೆ
ನಿನ್ನ ಪಿತೃವಿಂದೆ ವಂಚಿತನಾದೆನಲ್ಲದಿರೆ
ಜನಕಸುತೆ, ನೀನಿಂದರಸಿಯೆನಗೆ! ನನ್ನಳಂ,
ಮೋಸದಿಂ ರಾಮನೊಯ್ದೆನ್ನಾಕೆಯಂ, ಮರಳಿ
ನಾನುಯ್ಯಲೈತಂದಿಹೆನು, ಸೀತೆ[೧]

ಸೀತೆಯನ್ನು ಅಪಹರಿಸುವಾಗ ಅವಳೊಂದಿಗೆ ಹೇಳುವ ಈ ಮಾತುಗಳು ಅಪಹರಣದ ಮತ್ತೊಂದು ಕಾರಣವನ್ನು ಉಸುರುತ್ತದೆ. ಇದೇ ವಿಷಯವನ್ನು ರಾವಣ ಮುಂದೆ ತನ್ನ ಸತಿ

[೧] ಅದೇ, ಪುಟ ೨೪೯, ಸಾಲು ೪೬೩-೪೭೧

ಮಂಡೋದರಿಯ ಜೊತೆಯಲ್ಲಿಯು ಹೇಳುತ್ತಾನೆ. "ಸೀತೆಗೋಸುಗಮೆ ನಾಂ ತಪದಿಂ ಪಡೆದೆನೆನಿತೊ ಶಕ್ತಿಯಂ; ತವಿಯಲಾ ಸಂಪದಂ ಸೀತೆಗಾಗಿಯೇ?" ಇವು ಸೀತೆಯನ್ನು ಅಪಹರಿಸಲು ಆಧಾರವಾದ ಕಾರಣಗಳು. ಗಂಡನ ಈ ನಡವಳಿಕೆಯ ಬಗ್ಗೆ ತನ್ನ ಅಸಹಾಯಕತೆಯ ಸಂಕಟದ ಕಣ್ಣ ನೀರನ್ನು ಮಿಡಿದರೂ ಸಹ ಕಲ್ಲೆದೆಯ ರಾವಣನು "ಪೆಣ್ತನಕೆ ಸಾಜಂ ಸವತಿ ಮಚ್ಚರಂ" ಎಂದು ನುಡಿಯುತ್ತಾನೆ.

ಚಂದ್ರನಖಿಗೆ ರಾಮಲಕ್ಷ್ಮಣರಲ್ಲಿ ಪ್ರಣಯಭಾವ ಹೋಗಿಲ್ಲ. ಅವರನ್ನು ಕೊಲ್ಲಿಸುವುದು ಆಕೆಗೆ ಇಷ್ಟವಿರಲಿಲ್ಲ. ಆದ್ದರಿಂದ ಉಪಾಯ ಮಾಡಿ ರಾವಣನನ್ನು ಪ್ರಚೋದಿಸಿ ಸೀತೆಯನ್ನು ಕದ್ದು ತರುವಂತೆ ಹೇಳುತ್ತಾಳೆ. ಅಪಹರಿಸಿದ ಸೀತೆ ಅಣ್ಣನಿಗಾದರೆ, ಅಣ್ಣನೆದುರು ಸೋಲುವ ರಾಮಲಕ್ಷ್ಮಣರು ತನಗೆ ದೊರೆಯುತ್ತಾರೆಂಬ ದುರಾಲೋಚನೆಯು ಇವಳಿಗಿದೆ. ಇವಳ ಉಪದೇಶದಿಂದ ರಾವಣನ ಮನಸ್ಸಿನಲ್ಲಿ ಉಂಟಾದ ಚಿತ್ತ ಚಾಂಚಲ್ಯವನ್ನು ಕವಿ ಬಹು ಸೊಗಸಾಗಿ ಕಟ್ಟುತ್ತಾನೆ.

ಭಗಿನಿಯುಪದೇಶಮಂ
ಕೇಳ್ದನಾವೇಶದಿಂ ಸಮನಿಸಿತು ಕೋಪಕ್ಕೆ
ಕಾಮದ ಹದಂ ಕಣಿವೆಗುರುಳುವ ಝುರಿಯ ಜಲಕೆ
ಕಾಲುವೆ ರಚಿಸಿದಂತೆ, ಲಭಿಸಿದುದು ರಾವಣನ
ಸಹಜಕಾಮದ ಕಪಿಗೆ ರಾಜಕಾರಣಫಣಿಯ
ಮಿಣಿಯೇಣಿ ರೋಮಂಥಿಸಿತು ರತಿರೋಮಹರ್ಷಣದಿ
ಭಾವಜಪ್ರಾಣಪಶು ತಾಂ ಚಂದ್ರನಖಿಯ ಕೇಳ್ದ
ವೈದೇಹಿ ವರ್ಣನೆಯ ಮೃತ್ಯುಪಾಥೇಯಮಂ
. . . . . . . . . . . . . . . . . . . . . ..
ನೆನೆನೆನೆದನೊಂದೊಂದು ಪದಮಂ ಸಚಿತ್ರಮಂ,
ಮೋಹಸುರೆಯಿಂಟಿ ಕಲ್ಪನೆ ಕೆರಳಿದಾತ್ಮಕ್ಕೆ
ಸಾಹಸೋನ್ಮಾದಂ ಮದಿಸುವಂತೆ°

ತಂಗಿಯಿಂದ ಪ್ರಚೋದಿತನಾದ ರಾವಣ ಏಕಾಂತದಲ್ಲಿ ಸೀತೆಯನ್ನು ಅಪಹರಿಸುವ ವಿಧಾನವನ್ನು ಆಲೋಚಿಸಿ ಅನಂತರ ಅರಣ್ಯದಲ್ಲಿ ತಪಸ್ವಿಯಾಗಿದ್ದ ಮಾವಕಾಮರೂಪಿ ಮಾರೀಚನ ಬಳಿಗೆ ಬಂದು ಸೀತೆಯನ್ನು ಅಪಹರಿಸುವುದು ರಾಮನನ್ನು ನಿಸ್ತೇಜನಾಗಿ ಮಾಡುವುದಕ್ಕೆ ಆದ್ದರಿಂದ ನೀನು ಆಕೆಯ ಮುಂದೆ ಹೊಮ್ಮಿಗನಾಗಿ ಸುಳಿಯಬೇಕೆಂದು ಪ್ರಾರ್ಥಿಸುತ್ತಾನೆ. ಚಿಕ್ಕಂದಿನಿಂದಲೂ ರಾಮಬಾಣದ ರುಚಿ ಕಂಡಿದ್ದ ಮಾರೀಚನು ನಿರಾಕರಿಸುತ್ತಾನೆ. 'ನೀತಿವೇಳ್ದವರಾರೊ ನಿನಗಿದಂ, ಹದಿಬದೆಯ ಹರಣಮಂ, ನಿನ್ನ ಮೇಣ್

° ಅದೇ, ಲಂಕೇಶನೊಲಿಸಿದನು ಮಾರೀಚನಂ, ಪುಟ ೨೨೦, ಸಾಲು ೧೪೦-೧೫೩.

ಸಕಲ ಲಂಕೆಯ ಮರಣಮಂ..' ಎಂದು ಬುದ್ಧಿ ಹೇಳುತ್ತಾನೆ. ಕಾಮಾಂಧನಿಗೆ ಯಾವ ಮಾತು ರುಚಿಸುವುದಿಲ್ಲ. ಇವನ ಮಾತನ್ನು ಕೇಳಿ ನಕ್ಕು ನುಡಿಯುತ್ತಾನೆ.

"ಶಿಶುಮತಿಗಳಿಗೆ
ಹೇಳಯ್ಯ, ನಿನ್ನ ಹದಿಬದೆತನದ ಹಿರಿಮೆಯಂ!
ಕಟ್ಟುಕತೆಯೊಳಗಲ್ಲದೆಲ್ಲಿಹಳೊ ಪೃಥಿವಿಯಲಿ, ಪೇಳ್
ನಿನ್ನಾ ಪತಿವ್ರತಾ ಸ್ತ್ರೀ? ಜಗತ್ತ್ರಯಮುಮಂ
ದಹಿಸಿದ ಮಮ ಪ್ರತಾಪಜ್ವಾಲೆ, ಸರ್ವಮಂ
ಶೋಧಿಸಿರ್ಪುದು ನನ್ನ ಸಾಹಸದ ಕಯ್, ನಿನ್ನ ಈ
ವರ್ಣನೆಯ ವರವರ್ಣಿನಿಯನಾವೆಡೆಯೊಳುಂ ನಾಂ
ಸಂಧಿಸಿದೆನಿಲ್ಲಿನ್ನೆಗಂ, ಇನ್ನುಮಾ ಬಯಕೆ ತಾಂ
ಪೆರ್ಬಯಕೆ ಮಾತ್ರಮಾಗುಳಿದಿರ್ಪುದಯ್, ಅಯ್ಯೋ
ಮಾವಯ್ಯ, ಕೇಳೂರವೆನನ್ನಾತ್ಮಚರಿತಮಂ
ಮನ್ಮನೋ ದುರಿತಮಂ ಪುಟ್ಟುವಾಗಳೆಯೆ ನಾಂ
ನೆತ್ತರೊಳೆ ಪೆಣ್ಣೊಡಲಿನಾಸೆಯಾ ಬೇಟಮಂ
ಪೊತ್ತು ಪುಟ್ಟಿದೆನ್ನೆಸೆ! ಜನ್ಮದೌರ್ಬಲ್ಯಮಂ
ಜಯಿಸಲೆಂದಾನನಿತೆನಿತೊ ನಿಟ್ಟೆಯಂ ಪಟ್ಟು
ಬೇಯಿಸಿದೆನಾತ್ಮಮಂ ಪಾತಿವ್ರತ್ಯವ ನಂಬಿ,
ಪತ್ನೀವ್ರತಕ್ಕೆಳಿಸಿ, ಕಳೆದೆನಯ್ ತಾರುಣ್ಯಮಂ
ಮುಗ್ಧಬುದ್ಧಿಯಲಿ ನಾಂ ಬಯಸಿ ಮೋಹಿಪ ಮೊದಲೆ
ಪೆಣ್ತನಂ ಬಯಸಿತೆನ್ನಂ ಕಾತರಿಸಿತಯ್ಯೊ
ಮೇಲ್ವಾಯುತಾತುರದಿ! ತತ್ತರಿಸುತಂಚಿನೊಳ್
ದಣಿದುಯ್ಯಲಾಡುತಿರ್ದೆನ್ನಾತ್ಮಮೊಯ್ಯನೆಯೆ
ದುಮ್ಮಿಕ್ಕಿದುದೊ ಮನ್ಮಥ ರುಚಿಯ ರಸಾತಳಕೆ,
ಕೇಳಂದಿನಿಂದೆ ಪೆಣ್ಮನದೊಳೆನಗಿರ್ದೊಂದು
ಸುಂದರ ಪವಿತ್ರತಾ ಭಾವಂ ಶಿಥಿಲಮಾಗಿ,
ಭೋಗಭಾವಮೆ ಪೃಥುಲಮಾಯ್ತುಯ್ ದಡಕ್ಕಡರೆ
ಸಾಹಸದೊಳೀಜುವುದನಾನುಳಿಯದಿರ್ದೊಡಂ
ತೇಲಿ, ಹೋರುತೆ, ಕೊಚ್ಚಿ ಹೋದೇನಾ ಹುಚ್ಚುಹೊಳೆ
ಹೊನಲಿನಲಿ! ವಶವಾಗದಿರ್ದವರನೋರ್ವರಂ
ಕಂಡೆನಿಲ್ಲಾಂ ರಾಕ್ಷಸೇಶ್ವರನ ಮೈಸಿರಿಗೆ

ವಿತ್ತೇಶ ಚೇತನ್ಯೆಸಿರಿಗೆ, ದಿಕ್ಪಾಲರಂ
ಗೆಲ್ದ ಪೆಂಪಿಗೆ, ನಿಖಿಲ ಭೂಮಿನಾಥರನೊತ್ತಿ
ಬಾಯ್ಕೇಳಿಸಿದ ಯಶೋವೈಭವಕ್ಕೆ, ರಾವಣನ
ರಸಿಕತೆಗೆ, ಸತ್ತ್ವಕ್ಕೆ, ವೀರ್ಯಕ್ಕೆ, ತೇಜಕ್ಕೆ
ಊವನಕೆ ಕಂಡೆನಿಲ್ಲಾನೊರ್ವಳಂ, ನನಗೆ
ಮೆಚ್ಚಿ ವಶವಾಗದಿರ್ದಾ ಪವಿತ್ರಾಂಗಿಯಂ
ಹದಿಬದೆಯರೆಂದು ಹೆಸರಾಂತ ಹೆಣ್ಮಣಿಗಳಂ
ಪರಿಕಿಸಿದೆನವರುಂ ಸುಲಭಮಾದರಯ್ ಕಡೆಗೆ ಕೇಳ್
ಹದಿಬದಿಯರಿಹರೆಂಬ ನಂಬುಗೆ ಸತ್ತುದೆನ್ನದೆಗೆ"[೧]

ಎಷ್ಟೇ ಬಗೆ ಬಗೆಯಾಗಿ ಹೇಳಿದರೂ ಮಾರೀಚ ಒಪ್ಪದೆ ಇರುವುದ್ನನು ಕಂಡು 'ಬೆಸಕಯ್ಯದಿರಲೆನಗೆ ನೀನುಳಿ ಬರ್ದುಕಿನಾಸೆಯಂ' ಎಂದು ಬೆದರಿಕೆ ಹಾಕುತ್ತಾನೆ. ಮಾರೀಚನಿಗೆ ಬೇರೆ ಮಾರ್ಗವೇ ಇಲ್ಲ. ಆದರೆ ಇವನಿಗೆ ರಾವಣನಿಂದ ಸಾಯಲು ಇಷ್ಟವಿಲ್ಲ. ಅದಕ್ಕಾಗಿಯೇ ಮಾರೀಚ 'ಎನ್ನಾಯ್ಕೆ ರಾಮಬಾಣಂ' ಎಂದು ರಾಮನ ಕೈಯಲ್ಲಿ ಮಡಿಯಲು ತೀರ್ಮಾನಿಸಿ ರಾವಣನ ಮಾತಿಗೆ ಒಪ್ಪಿಕೊಳ್ಳುತ್ತಾನೆ. ಕನಕ ಮೃಗವಾಗಿ ಸೀತಾಪಹರಣ ಕಾರ್ಯಕ್ಕೆ ಯಶಸ್ವಿಯಾಗಿ ನೆರವಾಗುತ್ತಾನೆ. ಮಾರೀಚನಿಗೆ ರಾವಣನ ಕಾರಣದಿಂದ ರಾಮನ ಕೈಯಲ್ಲಿ ಮಡಿಯುವ ಸುಯೋಗ ದೊರೆಯುತ್ತದೆ. ಅದಕ್ಕಾಗಿಯೇ ಈತ 'ನಿನ್ನಿಂದೆನಗೆ ಮುಕ್ತಿ' ಎಂದು ರಾವಣನಿಗೆ ಹೇಳುತ್ತಾನೆ. ಅದರಂತೆಯೇ ಇವನ ಸಾವು ರಾವಣನ ಆತ್ಮ ಉದ್ಧಾರಕ್ಕೆ ಇಲ್ಲಿ ಪ್ರತಿಯೊಂದು ಪಾತ್ರವೂ ಮತ್ತೊಂದು ಪಾತ್ರದ ಉದ್ಧಾರಕ್ಕೆ ಒಂದಲ್ಲ ಒಂದು ರೀತಿಯಲ್ಲಿ ಕಾರಣವಾಗುತ್ತವೆ.

ರಾವಣನು ಎಣಿಸಿದಂತೆ ಸೀತೆಯನ್ನು ಕಳೆದುಕೊಂಡ ರಾಮನ ಧೈರ್ಯದ್ರುಮ ತತ್ಕಾಲಿಕವಾಗಿ ಕುಂದುತಂದಿದೆ. ಮತಿಭ್ರಾಂತನಾಗುತ್ತಾನೆ. ಭೂಜಾತೆ ಇದುವರೆಗೂ ರಾಮನೊಡನೆ ಇದ್ದರಿಂದ ವನವಾಸವು ಅರಮನೆ ವಾಸದಂತೆ ನಿರಾಯಾಸವಾಗಿ ಕಳೆದು ಹೋಗಿತ್ತು. ತನ್ನ ಬದುಕಿನ ಸಾರ ಸರ್ವಸ್ವವಾಗಿದ್ದ ಸೀತೆಯನ್ನು ಕಳೆದುಕೊಂಡು ಅವನು ಸಾಮಾನ್ಯರಂತೆ ದುಃಖಿಸುತ್ತಾನೆ.

ಜಿಂಕೆಯನ್ನು ಬೆನ್ನಟ್ಟಿ ಹೋಗಿದ್ದ ರಾಮನಿಗೂ ಅವನನ್ನು ಹಿಂಬಾಲಿಸಿ ಹೊರಟ ಲಕ್ಷ್ಮಣನಿಗೂ ಇದೆಲ್ಲಾ ರಾಕ್ಷಸರ ಮಾಯೆಯೆಂಬುದು ತಿಳಿದು ಇಬ್ಬರು ಎಲೆಮನೆಗೆ ಓಡಿಬರತ್ತಾರೆ. ಇವರ ಕಾತುರತೆ, ಒದಗಿರಬಹುದಾದ ಆಪತ್ತಿನ ಬಗ್ಗೆ ರಾಮನು ತೋರುವ ಭಯ, ಚಿಂತೆ, ವಿಹ್ವಲತೆ, ಗಾಬರಿ ಇವುಗಳನ್ನು ನೋಡಿದಾಗ ಕರುಣೆ ಕೋಡಿ ಹರಿಯುತ್ತದೆ. ಎಲೆಮನೆಯಲ್ಲಿ ಸೀತೆಯನ್ನು ಕಾಣದೆ ರಾಮನ ಹೃದಯಸ್ಥೈರ್ಯವೇ ಅಡಗಿ ಹೋಗುತ್ತದೆ.

---

[೧] ಅದೇ, 'ಲಂಕೇಶನೊಲಿಸಿದನು ಮಾರೀಚನಂ' ಪುಟ ೨೨೬-೨೨೮, ಸಾಲು ೩೧೮-೩೫೪

'ಹಾ ಸೀತೇ! ಹಾ ಸೀತೇ!
ಹಾ ಸೀತೆ! ಎಂದೆಂದು ಸುಯ್ದು ಮಾರುತ್ತರಂ
ರಣರಣದಾ ಶೂನ್ಯದಿಂದೆ ಮಾರ್ದನಿಯಾಗಿ
ಬಂದುದಲ್ಲದೆ ದೇವಿ ಓ ಕೊಂಡಳಿಲ್ಲ ಮೂಲೆ
ಮೂಲೆಯನರಸಿ ನೋಡಿದನು. ಬೆಳ್ಪರೋಲಂತೆ
ಸಂಧಿ ಸಂಧಿಯೊಳಿಣಿಕಿ, ಚಾಪೆ ಮಣೆಗಳನ್ನೆತ್ತಿ
ನಿಂದನೇನೊಂದುಮಂ ಕಾಣದರಿಯದೆ, ಮರ್ಚು
ಮೂರ್ಛೆಗೆ ಸಂದನಂತೆ ಬೆದರಿದನು ಲಕ್ಷ್ಮಣಂ
ತನ್ನಣ್ಣನಾ ರುದ್ರ ದುಃಸ್ಥಿತಿಗೆ'[೧]

ಇಡೀ ಅರಣ್ಯವನ್ನೇ ಹುಡುಕಿದರೂ ಎಲ್ಲಿಯೂ ಸೀತೆಯ ಸುಳಿವಿಲ್ಲ. ಲಕ್ಷ್ಮಣ ಅಣ್ಣನನ್ನು ಕುಟೀರಕ್ಕೆ ಎತ್ತಿಕೊಂಡು ಹೋಗಿ 'ಶಿಶುರೋಪ ಚಾರ ಶುಶ್ರೂಷೆ'ಯನ್ನು ಮಾಡುತ್ತಾನೆ. ಸಾಮಾನ್ಯ ಮಾನವನೊಬ್ಬ ತನ್ನ ಪ್ರಾಣಕ್ಕಿಂತಲೂ ಪ್ರಿಯೆಯಾದ ಸತಿಯನ್ನು ರಾಕ್ಷಸರ ಮಧ್ಯೆ ಕಾಡುಪಾಲು ಮಾಡಿದಾಗ ಉಂಟಾಗುವ ಶೋಕದ ನೈಜ ಚಿತ್ರಣವನ್ನಿಲ್ಲಿ ಕಾಣಬಹುದು.

ಸೀತೆ ತನ್ನ ಚಾರಿತ್ರ್ಯ ಪರೀಕ್ಷೆಯ ಪ್ರಯೋಗಶಾಲೆಯನ್ನು ತಾನೇ ಆಯ್ಕೆ ಮಾಡಿಕೊಂಡು ಅಪ್ರಜ್ಞಾಪೂರ್ವಕವಾಗಿ ತನ್ನನ್ನು ಅಪೂರ್ವ ಶೋಧನೆಗೆ ಒಡ್ಡಿಗೊಳ್ಳುತ್ತಾಳೆ. ತಾನು ಕಟ್ಟಿದ ಈ ಭದ್ರ ಅಡಿಪಾಯಕ್ಕೆ ಸವಾಲೆಸೆಯುವ ಅದ್ಭುತ ಪ್ರಸಂಗಗಳ ಮೂಲಕ ಅದನ್ನು ರುಜುವಾತು ಪಡಿಸುವ ಮಹತ್ತರ ಅವಕಾಶ ಇವಳಿಗೆ ಈ ಪ್ರಸಂಗದಲ್ಲಿ ದೊರೆಯುತ್ತದೆ. ಸೀತೆಯ ಪಾತ್ರ ನಿಜವಾಗಿಯೂ ಜೀವದುಂಬಿ ಅನ್ಯಾದೃಶವಾಗಿ ಕಂಗೊಳಿಸಿ ಮೇಲೇರುತ್ತಾ ತನ್ನ ಪರಿಸರವನ್ನು ಮೇಲೆತ್ತುತ್ತಾ ಹೋಗುವುದು ರಾವಣನಿಂದ ಅವಳ ಅಪಹರಣವಾದನಂತರವೇ ಎಂಬುದನ್ನು ಮರೆಯುವಂತಿಲ್ಲ.



[೧] ಅದೇ, 'ಓಲಕ್ಷ್ಮಣಾ' ಪುಟ ೨೫೬–೨೫೭, ಸಾಲು ೬೫೧–೬೫೯

# ಅಧ್ಯಾಯ ೭

## ಸೀತೆ ಪಾತ್ರದ ಆಧ್ಯಾತ್ಮಿಕ ಮಹತ್ವ

ಸೀತೆಯ ಆಧ್ಯಾತ್ಮಿಕ ತೇಜಸ್ಸಿನ ಮಹೋನ್ನತಿ ಶ್ರೀರಾಮಾಯಣ ದರ್ಶನದ ವೈಶಿಷ್ಟ್ಯಗಳಲ್ಲಿ ಒಂದು ಕಾವ್ಯ ಆರಂಭದಲ್ಲಿಯೇ ಸ್ಪಷ್ಟಪಡಿಸಿದಂತೆ ಸೀತೆ ಪ್ರಕೃತಿ ಸ್ವರೂಪಿಣಿ. ಅವಳ ಹುಟ್ಟು ಸಹ ಪ್ರಕೃತಿಯ ಒಡಲಿನಿಂದಲೇ ಆವಿರ್ಭವಿಸಿದ್ದು ರಾಮನನ್ನು ಪಡೆಯಲೇಬೇಕೆಂದು ನಿದ್ದೆಯನ್ನೆ ನೈವೇದ್ಯ ಮಾಡಿ ಪರಶಿವನಲ್ಲಿ ಪ್ರಾರ್ಥಿಸುತ್ತಾ ಆರಂಭವಾದ ಸೀತೆಯ ತಪಸ್ಸು ಕಾವ್ಯಕೊನೆ ಮುಟ್ಟುವುದರಲ್ಲಿ ಅವಳನ್ನು ಆಧ್ಯಾತ್ಮಿಕ ತೇಜಸ್ಸಿನ ಮಹಾಮೂರ್ತಿಯನ್ನಾಗಿ ಮಾಡುತ್ತದೆ.

ವನವಾಸ ಪ್ರಾಪ್ತಿಯಾದಾಗ ಗಂಡನೊಡನೆ ಹೊರಟು ನಿಲ್ಲುತ್ತಾಳೆ. ಮುಂದಿನ ಹದಿನಾಲ್ಕು ವರ್ಷಗಳು ಕಿರುವಯಸ್ಸಿನ ಈ ಕೋಮಲೆ ಇಂದ್ರಿಯ ನಿಗ್ರಹಿಸಿ ಸತಿಪತಿಯರ ದೈಹಿಕ ಭೋಗವನ್ನು ತೊರೆದು ಶುದ್ಧ ತಪಶ್ಚರ‍್ಯಯನ್ನು ಆಚರಿಸುವುದಾಗಿ ಘೋಷಿಸುತ್ತಾಳೆ. ಆಕೆ ಕೈಗೊಳ್ಳುವ ತಪಸ್ಸು ಅವಳನ್ನು ಮತ್ತಷ್ಟು ಗಟ್ಟಿಗೊಳಿಸುತ್ತದೆ. ಸೀತೆಯ ಹೃದಯ ವೈಶಾಲ್ಯ ಅನನ್ಯವಾದುದು. ಸೌಮಿತ್ರಿ ಮಿಶ್ರಮಿಸಿಕೊಂಡ ಕಲ್ಬಂಡೆ ಅವಳಿಗೆ 'ಕಲ್ದವಸಿ'ಯಾಗುತ್ತದೆ. ಎಲೆಮನೆಯೇ ಅರಮನೆಯಾಗುತ್ತದೆ.

ಸೀತೆಯ ಪಾತ್ರ ನಿಜವಾಗಿಯೂ ಜೀವದುಂಬಿ ಅನ್ಯದೃಶ್ಯವಾಗಿ ಕಂಗೊಳಿಸಿ ಮೇಲೇರುತ್ತಾ ತನ್ನ ಪರಿಸರವನ್ನೂ ಮೇಲೆತ್ತುತ್ತಾ ಹೋಗುವುದು ರಾವಣನಿಂದ ಅವಳ ಅಪಹರಣವಾದನಂತರವೆ ಹದಿಮೂರು ವರ್ಷಗಳು ಆಕೆ ಸಾಧಿಸಿದ ತಪಶ್ಶಕ್ತಿ ಮತ್ತು ಗಟ್ಟಿಗೊಳ್ಳುವುದು, ಉಜ್ವಲಗೊಳ್ಳುವುದು ಲಂಕೆಯಲ್ಲಿ ಒಂದು ವರ್ಷ ಅವಳು ಕೈಗೊಂಡ ಕಠಿಣ ತಪಸ್ಸು ಅವಳನ್ನು ಆಧ್ಯಾತ್ಮದ ಉತ್ತುಂಗಕ್ಕೇರಿಸುತ್ತದೆ.

ಅಪಹರಣಕ್ಕೆ ಮೂಲ ಪ್ರೇರಣಳಾದ ಚಂದ್ರನಖಿಯ ಮನಸ್ಸಿನಲ್ಲಿ ಸೀತೆಯ ಆಕಾರ ಆತ್ಮತೇಜಸ್ಸು, ದೃಢತೆಗಳು ಸದ್ಭಾವನೆಯನ್ನು ಮೂಡಿಸುತ್ತವೆ.

'ಇನ್ನೆಗಂ
ನೀಗೆಲಿದ, ನಿನ್ನನೊಲಿದತ್ತಿಗೆಯರಂತಲ್ಲಮೀ ...
ಪೆಣ್ಕಣಾ! ನಿನ್ನ ಛಲಕಿವಳ ಛಲ ಪಡಿಮಲೆಯೆ
ಗೆಲ್ವರಾರದನರಿಯೆನಯ್! ಮೂರ್ಛೆಯೊಳುಮೆಂತು
ದೃಢತೆ ಪಲ್ಗಚ್ಚಿದಂತಿದೆ, ನೋಡು, ಕೋಮಲೆಯ
ಮುಖದಿ'[೧]

---

[೧] ಅದೇ, 'ಸಂಸ್ಕೃತಿಲಂಕಾ' ಪುಟ ೩೨೪, ಸಾಲು ೨೮-೩೩

ಲಂಕೆಯ ಕಣಕಣವೂ ಭೂಜಾತೆಯ ಸ್ಪರ್ಶದಿಂದ ಚೇತನಗೊಳ್ಳುತ್ತದೆ. ಅಲ್ಲಿಯ ಗಾಳಿ ನೀರುಗಳಲ್ಲಿ ಆದರ್ಶದ ಸತ್ವ ಬೆರೆಯುತ್ತದೆ. ಅನಲೆಯೇ ಸೀತೆಯನ್ನು 'ನನ್ನ ಗುರುದೇವಿ' ಎಂದು ಒಪ್ಪಿಕೊಳ್ಳುತ್ತಾಳೆ. ಇವಳ ಸಾತ್ವಿಕ ಹಠಕ್ಕೆ ರಾವಣನ ಹೃದಯವೇ ತಲ್ಲಣಗೊಳ್ಳುತ್ತದೆ. ಇವನ ಮಡದಿಗಂತೂ ಸೀತೆ 'ಪೂಜ್ಯೆ'ಯಾಗುತ್ತಾಳೆ. ಅಶೋಕವನದ ನಿರ್ಮಲ ಪ್ರಕೃತಿಯ ಮಧ್ಯೆ ಸೀತೆಯ ಶುದ್ಧಸಾತ್ವಿಕ ಆತ್ಮೋದ್ಧಾರಕವಾದ ತೀವ್ರತಪಸ್ಸು ಸಾಗುತ್ತದೆ. ಪ್ರಕೃತಿಯ ಸಂಸರ್ಗದಿಂದ, ತಪಸ್ಸಿನಿಂದ ಸೀತೆ ಯೋಗಿನಿಯೇ ಆಗುತ್ತಾಳೆ.

> ನೋಡುತಿರೆಯಿರೆ, ಕೇಳುತಿರೆಯಿರೆ, ದೃಗಿಂದ್ರಿಯಕೆ
> ಶ್ರವಣೇಂದ್ರಿಯಕೆ ಭೇದಮಳಿದತ್ತು. ಮೆಲ್ಲನೆಯ
> ತೆರಯಾಗಿ, ಮೊರೆಯಾಗಿ, ತಿರೆಯೆಲ್ಲ ತಾನಾಗಿ
> ತನ್ನತನವನೆ ಮೀರಿ ನೆಗೆದುದು ಅತೀಂದ್ರಿಯಕೆ
> ದೇವಿಯಾತ್ಮಂ[೧]

ಸಹಜವಾಗಿಯೇ ಸೀತೆಯಲ್ಲಿ ಉಂಟಾದ ಅತೀಂದ್ರಿಯ ಸಿದ್ಧಿಯಿಂದಾಗಿ ರಾವಣನ ಬಗ್ಗೆ ದ್ವೇಷಕ್ಕಿಂತ ಹೆಚ್ಚಾಗಿ ಕರುಣೆ ಮೂಡುತ್ತದೆ. 'ಮರುಗುವೆನು ನಿನಗೆ ತಾಯ್ ಕೇಡಾಡಿ ಕಂದಂಗೆ ಮರುಗುವೋಲ್, ನನ್ನ ಕಲ್ಲೆರ್ದೆ ಕರುಗುತಿದೊ ನಿನಗೆ ಮೆಲಿತಪ್ಪುದು ದಿಟಂ' ಎನ್ನುತ್ತಾಳೆ. ಅವಳ ಅಂತರಂಗದ ಅವಿನಾಶಕಾರಿಯಾದ ಜಗದುದ್ಧಾರಕ ಆಧ್ಯಾತ್ಮತೇಜ ಅವನ ಮನಸ್ಸನ್ನು ಪ್ರವೇಶಿಸಿ ಅವನ ಮನಸ್ಸನ್ನು ಶೋಧನೆಗೆ ಗುರಿ ಮಾಡುತ್ತದೆ. ಇದರೊಡನೆ ಮಂಡೋದರಿಯ ಧ್ಯಾನವೂ ಬೆರೆತು ಸೀತೆಯ ಶಕ್ತಿ ಇಮ್ಮಡಿಗೊಳ್ಳುತ್ತದೆ.

ರಾವಣನಂಥ ಮಹಾಪರಾಕ್ರಮಿಗೆ ರಾಮಸೇನೆಯನ್ನು ಗೆಲ್ಲುವುದು ಅಸಾಧ್ಯದ ಮಾತಾಗಿರಲಿಲ್ಲ. ಆ ರಾಮಸೇನೆಗೆ ಅಜೇಯ ಆತ್ಮಶಕ್ತಿಯನ್ನು ತಂದುಕೊಟ್ಟದ್ದು ಸೀತೆಯ ವ್ರತ, ಅವಳ ತಪಸ್ಸು ಜಾನಕಿಯನ್ನು ಗೆಲ್ಲಲು ಪಣತೊಟ್ಟು ಬಾರಿ ಬಾರಿಗೂ ಸೋಲುವ ರಾವಣನ ಪ್ರಯತ್ನ ದಿನಗಳುರುಳಿದಂತೆ ಅದು ಕೇವಲ ಕಾಮಾಸಕ್ತಿಯಾಗಿ ಉಳಿದಿಲ್ಲ. ಅದು ಈಗ ಆತ್ಮಮೋಹವಾಗಿ ಉಳಿದಿದೆ. ಹಾಗಾಗಿ ಈ ಪ್ರಯತ್ನ ಈಗ ಇವನ ಪಾಲಿಗೆ 'ತಪಸ್ಸಾಧನ' ರಾವಣನಂಥ ಮಹಾಕಾಮಿಯ ಲೋಕಭಯಂಕರನ ಮೋಹವನ್ನು ಆತ್ಮದರ್ಶನದ ತಪಸ್ಸಾಗಿ ಪರಿವರ್ತಿಸಿದ ಹಿರಿಮೆ ಭೂಜಾತೆಯ ಎಂಬುದನ್ನು ಈ ಕಾವ್ಯ ಮತ್ತೆ ಮತ್ತೆ ಧ್ವನಿಸುತ್ತದೆ.

ಮಂಡೋದರಿ, ಕನಸಿನಲ್ಲಿ ಚಿತೆಯೇರಿದುದನ್ನು ಆ ಭಸ್ಮರಾಶಿಯಿಂದ 'ಮಹಾತಪಸ್ವಿನಿ ಸೀತೆ' ಉದ್ಭವಿಸಿದುದನ್ನು ಕಂಡನೆಂದು ಹೇಳುತ್ತಾಳೆ. ತನ್ನ ತಪೋ ಬಲದಿಂದ ಸೀತೆ ಎಂಥ ಯೋಗಿನಿಯಾಗಿದ್ದಳೆಂಬುದನ್ನು ತಿಳಿಸುತ್ತಾಳೆ. ಸೀತೆ ತನ್ನ ಮನೋವಲಯದಲ್ಲಿ ಒಳಗಾದವರೆಲ್ಲರಿಗೂ ಅವರ ದೌರ್ಬಲ್ಯವನ್ನು ತಿಳಿಯುವಂತೆ ಮಾಡಿ ಅವರ ಊರ್ಧ್ವಮುಖ ಬೆಳವಣಿಗೆಗೆ ಕಾರಣಳಾಗುತ್ತಾಳೆ. ಆಕೆ ದೈವಾಂಶಸಂಭೂತಳಾಗಿದ್ದಾಳೆಂಬುದನ್ನು ಶಿವನೇ

---

[೧] ಅದೇ, 'ನಾನಕ್ಕನೆನ್ ನಿನಗೆ, ತಂಗೆ' ಪುಟ ೩೩೫, ಸಾಲು ೯-೧೩

ತಿಳಿಸುತ್ತಾನೆ. ಸೀತೆಯ ಸಾನಿಧ್ಯದ ಪ್ರಭಾವ ತ್ರಿಜಟೆಯಂಥ ಸಾಮಾನ್ಯ ಮುಗ್ಧ ರಕ್ಕಸ ಸ್ತ್ರೀಯನ್ನು ಜ್ಞಾನಿಯನ್ನಾಗಿ ಮಾಡುತ್ತದೆ.

‘ನೀನೆ ಗುರುವಲ್ತೆ?’
ತ್ರಿಜಟೆಯೆಂದಳ್ ಧನ್ಯಭಾವದಿಂ ‘ನಿನ್ನೊಡನೆ
ಇನಿತು ದಿನಮಿರ್ದು ನಿನ್ನಂ ಸೇವೆಗೆಯ್ದುದೇನ್
ಬರಿಯ ದಾಸ್ಯಮೆ? ತಪಂ ತಾನಲ್ತೆ? ನುಡಿಗೇಳ್ದು
ನಡೆನೋಳ್ದು, ಸಾನಿಧ್ಯದೊಳೆ ಪಗಲಿರುಳುಮಳ್ದು
ಪೂರ್ವಜನ್ಮದ ಪುಣ್ಯಫಲದಿ ನಿನ್ನನ್ನರಿವ
ಕೃಪೆಯೊದಗಿದೆನಗೆ, ಪೇಳ, ಅಂತು ನುಡಿವನಿತದೇನ್
ಪಿರಿದೆ?[೧]

ಧಾನ್ಯಮಾಲಿನಿಗೆ ಅವಳ ತಪ್ಪಿನ ಅರಿವಾಗಿ ಮೈಮನಸ್ಸುಗಳೆರಡೂ ಒಂದೇ ಎಂದು ಭಾವಿಸಿದ್ದ ಆಕೆಗೆ ಮೈಗಿಂತ ಬೇರೆಯಾಗಿ ಮನಸಿದೆ ಎಂಬ ಪ್ರಜ್ಞೆ ಮೂಡುವುದು ಸೀತೆಯ ದರ್ಶನದಿಂದಲೆ. ಇವಳ ಮನಸ್ಸು ಮೈಥಿಲಿಯನ್ನು ಗುರುವಾಗಿ ಸ್ವೀಕರಿಸುತ್ತದೆ.

ಶ್ರೀರಾಮ ಸೀತೆಯನ್ನು ತಿರಸ್ಕರಿಸಿದಾಗ ಅಷ್ಟೇದಿಟ್ಟಳಾಗಿ ಅಗ್ನಿಪ್ರವೇಶ ಮಾಡುತ್ತಾಳೆ. ಪುರುಷಶಕ್ತಿಯಾದ ಶ್ರೀರಾಮನು ಪ್ರಕೃತಿಸ್ವರೂಪಿಣಿ ಸೀತೆಯನ್ನು ಪಡೆಯಲು ಅಗ್ನಿಪ್ರವೇಶ ಮಾಡಬೇಕಾದ್ದು ಅಗತ್ಯ ಎಂಬ ದಾರ್ಶನಿಕ ಅರ್ಥವನ್ನು ಈ ಸಂದರ್ಭ ಧ್ವನಿಸುತ್ತದೆ. ಅಗ್ನಿ ಪ್ರವೇಶ ಮಾಡಿದ ಸೀತೆಯನ್ನು ಪಡೆಯಲು ರಾಮನು ಅಗ್ನಿ ಪ್ರವೇಶ ಮಾಡಿ ಅರ್ಹನೆನಿಸುವುದು ಅನಿವಾರ್ಯ ಎಂಬ ಎತ್ತರಕ್ಕೆ ಈ ಪಾತ್ರ ಬೆಳೆದು ನಿಂತಿದೆ. ಎಲ್ಲರಂತೆಯೇ ಪತಿಯೊಡನೆ ಬಂದು ಎಲ್ಲರಂತೆಯೇ ಆಸೆ ಆಕಾಂಕ್ಷೆಗಳನ್ನು ಹೊಂದಿದ, ಕೋಪ, ಹಾಸ್ಯ, ಪ್ರೀತಿ, ಪ್ರೇಮ, ಅನುಕಂಪಗಳನ್ನು ಹೊಂದಿದ ಜಾನಕಿ ಕೈಗೊಳ್ಳುವ ತಪಸ್ಸಿನಿಂದಾಗಿ ಆಧ್ಯಾತ್ಮ ತೇಜಸ್ಸಿನ ಮಹಾಮೂರ್ತಿಯಾಗಿ ಪರಿಣಮಿಸುತ್ತಾಳೆ.



[೧] ಅದೇ, ‘ದೂರಮಿರದಿನ್ ಸುಗತಿ? ಪುಟ ೨೦೦, ಸಾಲು ೯೬-೧೦೨

# ಅಧ್ಯಾಯ ೭

## ಉಪಸಂಹಾರ

ವಾಲ್ಮೀಕಿಯ ಕೈಯಲ್ಲಿ ಪರಮಪೂಜ್ಯಳಾಗಿ ಚಿತ್ರಿತವಾದ ಸೀತೆ ಕುವೆಂಪು ಕೈಯಲ್ಲಿ ಅಷ್ಟೇ ಪೂಜ್ಯಳಾಗಿ ಪರರ ಹಿತವನ್ನು ಬಯಸುವ ಮಹಾ ಮೂರ್ತಿಯಾಗಿ ಕಾಣಿಸಿಕೊಳ್ಳುತ್ತಾಳೆ. ಮೂಲದಲ್ಲಿ ಪರಮ ನೀಚನಾಗಿ ಸೀತೆಯ ಸಂಸರ್ಗದಿಂದಲೂ ತನ್ನ ನಡತೆಯನ್ನು ಬದಲಾಯಿಸಿಕೊಳ್ಳದ ರಾವಣ ಇಲ್ಲಿ ಸೀತೆಯ ಆಧ್ಯಾತ್ಮಿಕ ತೇಜಸ್ಸಿಗೆ ಒಳಗಾಗುತ್ತಾನೆ. 'ಪಾಪಿಗುಂ ಉದ್ಧಾರಮಿಹುದೌ ಸೃಷ್ಟಿಯ ಮಹದ್‌ವ್ಯೂಹ ರಚನೆಯೊಳ್' ಎಂಬ ಕವಿವಾಣಿಯಂತೆ ಸೀತೆ ಪಾಪಿ ರಾವಣನ ಉದ್ಧಾರಕ್ಕಾಗಿ ನೋಂಪಿಯನ್ನು ಕೈಗೊಳ್ಳುತ್ತಾಳೆ.

'ಶ್ರೀರಾಮಾಯಣದರ್ಶನಂ ಮತ್ತು ವಾಲ್ಮೀಕಿ ರಾಮಾಯಣಗಳಲ್ಲಿ ಸೀತೆ; ಒಂದು ತೌಲನಿಕ ಅಧ್ಯಯನ' ಈ ಒಂದು ಸಂಪ್ರಬಂಧದಲ್ಲಿ ೭ ಅಧ್ಯಾಯಗಳಲ್ಲಿ ಸೀತೆಯನ್ನು ಕುರಿತು ವಿವಿಧ ನೆಲೆಗಳಲ್ಲಿ ಚರ್ಚಿಸಲಾಗಿದೆ. ಪರಮ ಪಾವನಳಾದ ವಾಲ್ಮೀಕಿಯ ಸೀತೆ ಹೇಗೆ ತನ್ನ ಪಾವಿತ್ರ್ಯತೆಯನ್ನು ಉಳಿಸಿಕೊಂಡೆ, ಬದಲಾದ ಒಂದು ಕಾಲಘಟ್ಟದಲ್ಲಿ ಆಧುನಿಕ ಮಹಾ ಕವಿಯ ಕೈಯಲ್ಲಿ ಮೂಡಿಬಂದಳು ಎಂಬುದನ್ನು ಅಧ್ಯಯನ ಮಾಡುವ ಉದ್ದೇಶವನ್ನು ಮೊದಲ ಅಧ್ಯಾಯದಲ್ಲಿ ಹೇಳಲಾಗಿದೆ. ಎರಡನೆಯ ಅಧ್ಯಾಯ ವಾಲ್ಮೀಕಿಯ ರಾಮಾಯಣದಲ್ಲಿ ಕಂಡುಬರುವ ಸೀತೆಯನ್ನು ಮಾತ್ರ ನೋಡಲಾಗಿದೆ. ದೈವತ್ವದ ಅಂಶವಿದ್ದರೂ ಕೂಡ ಇವಳಲ್ಲೂ ರಾಗ, ದ್ವೇಷಗಳಿವೆ. ಸಹನೆ, ಕ್ಷಮಾಗುಣ, ವಿವೇಕ, ಧೈರ್ಯವಿದೆ. ಮುಖ್ಯವಾಗಿ ವಾಲ್ಮೀಕಿಯಲ್ಲಿ ಸೀತೆ ರಾಮಸತಿಯಾಗಿ ಗೋಚರಿಸುತ್ತಾಳೆ. ಮೂರನೆಯ ಅಧ್ಯಾಯದಲ್ಲಿ ಕುವೆಂಪು ಕೈಯಲ್ಲಿ ಮೂಡಿಬಂದಿರುವ ಸೀತೆಯನ್ನು ವಿಶೇಷವಾಗಿ ಕುರಿತು ಚರ್ಚೆ ಮಾಡಲಾಗಿದೆ. ಪ್ರೀತಿಯ ಮಡದಿಯಾಗಿ ರಾಮನೊಟ್ಟಿಗೆ ಬಂದು ದುಷ್ಟನಿಂದ ಅಪಹರಣಕ್ಕೊಳಗಾದರೂ ತನ್ನ ವ್ಯಕ್ತಿತ್ವವನ್ನು ಉನ್ನತ ಗೊಳಿಸಿಕೊಳ್ಳುತ್ತಲೇ ತನ್ನ ಪರಿಸರವನ್ನು ಉನ್ನತಗೊಳಿಸುತ್ತಾಳೆ. ಇಲ್ಲಿ ಸೀತೆ ವೈರಭಾವಕ್ಕಿಂತ ಮಾತೃದೀಪ್ತಳಾಗಿ ಗೋಚರಿಸುತ್ತಾಳೆ. ರಾವಣನ ಉದ್ಧಾರಕ್ಕಾಗಿ ತಪಸ್ಸು ಆಚರಿಸುತ್ತಾಳೆ. ರಾವಣನಿಗೆ ತಾಯಿಯಂತೆ ಕರಗ ಮರಗುತ್ತಾಳೆ.

ನಾಲ್ಕನೆಯ ಅಧ್ಯಾಯದಲ್ಲಿ ವಾಲ್ಮೀಕಿಗಿಂತ ಕುವೆಂಪು ಕೈಯಲ್ಲಿ ಸೀತೆ ಹೇಗೆ ವಿಭಿನ್ನವಾಗಿ ವಿಶಿಷ್ಟವಾಗಿ ಮಾತೃರೂಪಳಾಗಿ ಮೂಡಿ ಬಂದಿದ್ದಾಳೆ ಎಂಬುದನ್ನು ನೋಡಲಾಗಿದೆ. ಎಲ್ಲಕ್ಕೂ ಮೂಲ ಭೂಮಿಕೆಯಾಗಿ ಗೋಚರಿಸುವ ಕಥೆಯ ಹರಿಯುವಿಕೆಗೆ ಕಾರಣವಾಗುವ ಸೀತಾಪಹರಣವನ್ನು ಮುಂದಿನ ಅಧ್ಯಾಯದಲ್ಲಿ ವಿಶೇಷವಾಗಿ ನೋಡಲಾಗಿದೆ. ಸಿಟ್ಟು, ಸೆಡವು, ಹಾಸ್ಯ, ಪ್ರೇಮ, ಪ್ರೀತಿ, ಅನುಕಂಪಗಳನ್ನು ಹೊಂದಿರುವ ಸೀತೆ ಆಧ್ಯಾತ್ಮಿಕ ತೇಜಸ್ಸಿನ ಮಹಾಮೂರ್ತಿಯಾಗಿ ಹೇಗೆ ಪಡಿಮೂಡುತ್ತಾಳೆ ಎಂಬುದನ್ನು ಆರನೇ ಅಧ್ಯಾಯದಲ್ಲಿ ನೋಡಲಾಗಿದೆ. ಕೊನೆಯ ಅಧ್ಯಾಯ ಉಪಸಂಹಾರವನ್ನು ಹೊಂದಿದೆ. ಹೀಗೆ ಸೀತೆ ತಾನೂ ಬೆಳೆಯುತ್ತಾ ತನ್ನ ಸುತ್ತಲಿನ ಪರಿಸರದ ಬೆಳವಣಿಗೆಗೂ ಕಾರಣಳಾಗುತ್ತಾಳೆ. ವಾಲ್ಮೀಕಿಗಿಂತ ಕುವೆಂಪು ಕೈಯಲ್ಲಿ ಸೀತೆಯ ಪಾತ್ರ ವಿಶಿಷ್ಟವೂ ಜೀವಂತವೂ ಆಗಿ ಮೂಡಿಬಂದಿದೆ.

# ಅಧ್ಯಯನ ಸಾಮಗ್ರಿಗಳು

೧. ಆದಿಕವಿ ವಾಲ್ಮೀಕಿ, ಮಾಸ್ತಿವೆಂಕಟೇಶ ಅಯ್ಯಂಗಾರ್, ಜೀವನ ಕಾರ್ಯಾಲಯ, ಬೆಂಗಳೂರು. ೧೯೫೫.

೨. ಕನ್ನಡ ವಾಲ್ಮೀಕಿ ರಾಮಾಯಣ ಸಂಪುಟ ೧, ೨ ಡಾ.ಸಿ.ಎನ್ ಶ್ರೀನಿವಾಸ ಅಯ್ಯಂಗಾರ್. ಡಿ.ವಿ.ಕೆ. ಮೂರ್ತಿ, ಮೈಸೂರು ೧೯೭೩.

೩. ಕುವೆಂಪು ಸಾಹಿತ್ಯ: ಕೆಲವು ಅಧ್ಯಾಯಗಳು, ಸಂ.೩ ದೇ.ಜ.ಗೌ., ಸಹ್ಯಾದ್ರಿ ಪ್ರಕಾಶನ, ಮೈಸೂರು ೧೯೮೯.

೪. ಕುವೆಂಪು ದರ್ಶನ ಮತ್ತು ಸಂದೇಶ, ದೇ.ಜ.ಗೌ., ಸಹ್ಯಾದ್ರಿ ಪ್ರಕಾಶನ, ಮೈಸೂರು ೧೯೮೫.

೫. ಕುವೆಂಪು ದರ್ಶನ ಸಂ.೧ ದೇ.ಜ.ಗೌ., ಕನ್ನಡ ವಿಶ್ವವಿದ್ಯಾನಿಲಯ, ಪ್ರಸಾರಾಂಗ, ಹಂಪಿ.

೬. ಕುವೆಂಪು ಪುನರ್ಮನನ, ಪ್ರಸಾರಂಗ, ಮೈಸೂರು ವಿಶ್ವವಿದ್ಯಾಲಯ ೨೦೦೪.

೭. ನವೀನ ದೃಷ್ಟಿಯಲ್ಲಿ ಶ್ರೀ ವಾಲ್ಮೀಕಿ ರಾಮಾಯಣ–ಸೀತಾಸುತ, ಸೀತಾಸುತ ಪ್ರಕಾಶನ, ಮಂಡ್ಯ ೧೯೮೬.

೮. ಪರಂಪರೆ ಮತ್ತು ಕುವೆಂಪು ಸುಜನಾ, ಸಹ್ಯಾದ್ರಿ ಪ್ರಕಾಶನ, ೧೯೮೪.

೯. ಮಹಾನುಭಾವ ರಾವಣ ಮತ್ತು ಪುರುಷೋತ್ತಮ ಶ್ರೀರಾಮ, ಸೀತಾಸುತ, ಸೀತಾಸುತ ಪ್ರಕಾಶನ, ಮಂಡ್ಯ ೧೯೮೫

೧೦. ರಾಮಾಯಣದ ಕೆಲವು ವಿಚಾರಗಳು, ಅ.ಬಿ.ರಂಗಸ್ವಾಮಿಭಟ್, ಶ್ರೀವಿನಾಯಕ ಪ್ರಿಂಟಿಂಗ್ ವರ್ಕ್ಸ್, ಮೈಸೂರು ೧೯೭೩.

೧೧. ವಾಲ್ಮೀಕಿ ರಾಮಾಯಣ, ಉ.ಕಾ.ಸುಬ್ಬರಾಯಾಚಾರ್, ಮೈಸೂರು ವಿಶ್ವವಿದ್ಯಾಲಯ ಪ್ರಚಾರ ಪುಸ್ತಕಮಾಲೆ, ಪ್ರಸಾರಂಗ, ೧೯೬೭.

೧೨. ವಾಲ್ಮೀಕಿ ರಾಮಾಯಣ ಶಾಪ ಮತ್ತು ವರ; ಲೇಖಕರು–ಶ್ರೀಪಾದ ರಘುನಾಥ ಬಿಡೆ, ಅನುವಾದಕರು, ಸೌ.ಸರಸ್ವತಿ ಗಜಾನನ ರಿಸಬೂಡ, ಗೀತಾ ಬುಕ್ ಹೌಸ್, ಮೈಸೂರು. ೧೯೯೦.

೧೩. ವಿವಕ್ಷೆ : ಮಳಲಿ ವಸಂತಕುಮಾರ್, ತ.ವೆಂ.ಸ್ಮಾರಕ ಗ್ರಂಥಮಾಲೆ, ಕೃಷ್ಣಮೂರ್ತಿಪುರಂ, ಮೈಸೂರು ೧೯೭೨.

೧೪. ರಾಮಾಯಣದರ್ಶನಂ, ಕುವೆಂಪು ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೪.

೧೫. ಶ್ರೀರಾಮಾಯಣದರ್ಶನಂ ಒಂದು ವಿಮರ್ಶಾತ್ಮಕ ಅಧ್ಯಯನ, ಡಾ.ಎಚ್.ಜೆ. ಲಕ್ಕಪ್ಪಗೌಡ.

೧೬. ಶ್ರೀಕುವೆಂಪು ಸಾಹಿತ್ಯಾವಲೋಕನ ಡಾ.ಡಿ.ಕೆ. ರಾಜೇಂದ್ರ, ಸಹ್ಯಾದ್ರಿ ಪ್ರಕಾಶನ, ಮೈಸೂರು.

೧೭. ಸೀತೆ ಮತ್ತು ಸೀತಾಸಂಹಿತೆ, ಸೀತಾಸುತ, ಸೀತಾಸುತ ಪ್ರಕಾಶನ ಮಂಡ್ಯ ೧೯೮೩.

೧೮. ಸೀತಾದರ್ಶನ, ಸೀತಾಸುತ, ನಭಶ್ರೀ ಪ್ರಕಾಶನ, ಮೈಸೂರು ೧೯೭೯.



